KA / BG-GPO/2515/WPP-47/2006-2008 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೧ | ಬೆಂಗಳೂರು, ಗುರುವಾರ, ಜನವರಿ ೧೯, ೨೦೦೬ (ಪುಷ್ಯ ೨೯, ಶಕ ವರ್ಷ ೧೯೨೭) | ಸಂಚಿಕೆ ೩ |
|---|---|---|


## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ :** 2005-2006ನೇ ಶೈಕ್ಷಣಿಕ ಸಾಲಿಗೆ ಕೆ.ಜಿ.ಎಫ್.ನ ಶ್ರೀ ಬಿ.ವಿ.ಎನ್. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ :**
1. ದಿನಾಂಕ: 31.12.2003ರ ಸಂ. ಇಡಿ 447 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ: 20.04.2005 ಸಂ. F.SRO/ NCTE/ B.P.Ed/ 2005-06/ 508ರ/NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ: 16.09.2005ರ ಸಂಖ್ಯೆ:SBVN/ CDPE/17/2005-06ರ ಕೋಲಾರದ ಶ್ರೀ ಭಾರತೀಯ ವಿದ್ಯಾರ್ಥಿ ನಿಲಯ ಎಜುಕೇಷನ್ ಸೊಸೈಟಿಯ ಕಾರ್ಯದರ್ಶಿಯವರ ಪತ್ರ.
4. ದಿನಾಂಕ: 05.09.2003 ಮತ್ತು 22.09.2003ರ ಸಂಖ್ಯೆ: ಎಸಿಎ-3/ LIC/B.Ed/B.P.Ed/2003-04ರ ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಕೆ.ಜಿ.ಎಫ್‌ನ ಶ್ರೀ ಬಿ.ವಿ.ಎನ್. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 20.04.2005ರ ಆದೇಶದಲ್ಲಿ ಎನ್‌ಸಿಟಿಇಯು ಕೋಲಾರದ ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50(ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಕೋಲಾರದ ಶ್ರೀ ಭಾರತೀಯ ವಿದ್ಯಾರ್ಥಿ ನಿಲಯ ಎಜುಕೇಷನ್ ಸೊಸೈಟಿಯ ಕಾರ್ಯದರ್ಶಿಯವರು ಶ್ರೀ ಬಿ.ವಿ.ಎನ್. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಕೆ.ಜಿ.ಎಫ್.ನ ಶ್ರೀ ಬಿ.ವಿ.ಎನ್. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 360 ಯುಬಿವಿ 2005, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಕೆ.ಜಿ.ಎಫ್‌ನ ಶ್ರೀ ಬಿ.ವಿ.ಎನ್. ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-2006ನೇ** ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್.1663

**EDUCATION SECRETARIAT**

**Sub :** Centrally sponsored Scheme of Re-Structuring and Re-organisation of Teachers Education-release of recurring grants to meet the Expenditure on salaries of staff in DIET's and CTE's of Karnataka for the year 2005-06.

**Read :** 1. State Government letter No.ED 247 YOSAKA 2005 dated:23-08-2005.
2. Letter No.F.44-8/2004-EE.9 dated 30-9-2005 from the Secretary to Government of India, MHRD, Department of E.E & L, New Delhi.

**PREAMBLE:**

In Government letter dated 23-8-2005 read at (1) above a proposal was sent to Government of India seeking recurring grant for the year 2005-06 towards centrally sponsored scheme of teacher education for the year 2005-06 in the state of Karnataka. After considering the proposal Government of India vide their letter dated 30-9-2005 read at (2) above have sanctioned Rs.1644.85 lakhs towards centrally sponsored scheme of Teacher Education to Karnataka for the year 2005-06. The Government has considered releasing this amount and accordingly orders as follows:

**Order No.ED 247 YOSAKA 2005, Bangalore, Dated:30th November, 2005**

[ED 76 SWEEMARA (UNIQUE) 2005 DATED:30-11-2005]

Sanction of Government is accorded to release a sum of Rs.1644.85 lakh (Rupees one thousand six hundred and forty four lakh eighty five thousand only) to the Director, DSERT, Bangalore for meeting recurring expenditure of salaries of staff working in DIETs, CTEs, and IASEs and training expenditure of 20 DIETs, 9 CTEs and 2 IASEs in the State for the year 2005-06.

The release of above grants under central Assistance is subject to the conditions stipulated in Government of India letter No.F.44-8/2004-EE.9 dated 30-9-2005.

The Director of public Instructions ( Research and Training), Bangalore is authorised to draw the amount and also to submit monthly expenditure statement, utilisation certificate and half yearly progress report as stipulated in the guideline.

The expenditure on this shall be debitable to the Head of Account 2202-80-800-0-19-002 (P.V).

This order issues in confirmation with the Finance Department credit slip No.FD 2241 FRC 2005 dated 14-11-2005.

By order and in the name of the Governor of Karnataka
**K. Srikanteshwara**
Special Officer & Ex-Officio,
Joint Secretary to Government (planning),
Education Department.

PR-1693

**ಶಿಕ್ಷಣ ಸಚಿವಾಲಯ**

**ವಿಷಯ :** 2005-2006ನೇ ಶೈಕ್ಷಣಿಕ ಸಾಲಿಗೆ ಕೋಲಾರದ ಎ.ಇ. ಮತ್ತು ಸಿ.ಎಸ್. ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ :** 1. ದಿನಾಂಕ: 27.12.2003ರ ಸಂ. ಇಡಿ 388 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ: 20.04.2005 ಸಂ. F.SRO/ NCTE/ B.P.Ed/ 2005-06/ 510ರ/ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ: 16.09.2005ರ ಸಂಖ್ಯೆ:PCDPE/16/2005-06ರ ಅಧ್ಯಕ್ಷರು, ಅಮೃತ ಎಜುಕೇಷನಲ್ ಮತ್ತು ಕಲ್ಚರಲ್ ಸೊಸೈಟಿ, ಕೋಲಾರ ಇವರ ಪತ್ರ.
4. ದಿನಾಂಕ: 24.11.2003 ಸಂ. ಎಸಿಎ-3/ ಸಪಸ/ ಹೊಕಾಪ್ರ/ ಹೊಕೊಪ್ರ/ 2003-04ರ ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಕೋಲಾರದ ಎ.ಇ. ಮತ್ತು ಸಿ.ಎಸ್. ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್. ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 20.04.2005ರ ಆದೇಶದಲ್ಲಿ ಎನ್‌ಸಿಟಿಇಯು ಕೋಲಾರದ ಎ.ಇ. ಮತ್ತು ಸಿ.ಎಸ್. ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50(ಐವತ್ತು) ವಿದ್ಯಾರ್ಥಿ

ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಬೆಂಗಳೂರಿನ ಅಮೃತ ಎಜುಕೇಷನಲ್ ಮತ್ತು ಕಲ್ಚರಲ್ ಸೊಸೈಟಿಯ, ಅಧ್ಯಕ್ಷರು ಎ.ಇ. ಮತ್ತು ಸಿ.ಎಸ್. ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನಲ್ಲಿ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಕೋಲಾರದ ಎ.ಇ. ಮತ್ತು ಸಿ.ಎಸ್ ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 361 ಯುಬಿವಿ 2005, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಕೋಲಾರದ ಎ.ಇ. ಮತ್ತು ಸಿ.ಎಸ್. ಪವನ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್‌ನ ಬಿ.ಪಿ.ಎಡ್ ಕೋರ್ಸಿಗೆ 2005-2006ನೇ** ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್.1664

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಇಲ್ಲಿ ಸ್ವಚ್ಛತೆ ಹಾಗೂ ಭದ್ರತಾ ಕಾರ್ಯವನ್ನು 2005-06ನೇ ಸಾಲಿಗೆ ಸಂಬಂಧಿಸಿದಂತೆ ಗುತ್ತಿಗೆ ಆಧಾರದ ಮೇಲೆ ನಿರ್ವಹಿಸಲು ಖಾಸಗಿ ಸಂಸ್ಥೆಯವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 17.11.98 ಮತ್ತು 01.03.1999 ಸಂಖ್ಯೆ: ಆಕುಕ 462 ಎಂಎಸ್‌ಎಫ್ 97ರ ಸರ್ಕಾರಿ ಆದೇಶ.

2. ದಿನಾಂಕ: 19.07.2005ರ ಸಂಖ್ಯೆ: ವೈಶಿನಿ: ಎಂಇಪಿ(1) 07/ 2005-06ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1. ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 17.11.1998 ಮತ್ತು 01.03.1999ರ ಸರ್ಕಾರಿ ಆದೇಶಗಳಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ವ್ಯಾಪ್ತಿಯಲ್ಲಿ ಬರುವ 16 ವೈದ್ಯಕೀಯ ಮತ್ತು ದಂತ ಕಾಲೇಜುಗಳು ಮತ್ತು ಬೋಧಕ ಆಸ್ಪತ್ರೆಗಳಲ್ಲಿನ ಸ್ವಚ್ಛತಾ ಮತ್ತು ಭದ್ರತಾ ಕಾರ್ಯಗಳನ್ನು ಖಾಸಗಿ ಸಂಸ್ಥೆಗಳಿಗೆ ವಹಿಸಲು ಕೆಲವು ಷರತ್ತುಗಳಿಗೊಳಪಟ್ಟು ಮಂಜೂರಾತಿಯನ್ನು ನೀಡಲಾಗಿದೆ.

2. ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕ್ರಮಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 19.07.2005ರ ಪತ್ರದಲ್ಲಿ ವರದಿ ಮಾಡುತ್ತಾ, ಮೇಲಿನ ಆದೇಶದಂತೆ ಅಲ್ಲಿನ ಸ್ವಚ್ಛತಾ ಮತ್ತು ಭದ್ರತಾ ಕಾರ್ಯಗಳನ್ನು ಖಾಸಗಿ ಸಂಸ್ಥೆಯವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ಪ್ರತ್ಯೇಕವಾಗಿ ಟೆಂಡರ್ ಕರೆದು ಕ್ರಮಕೈಗೊಳ್ಳುವ ಸಲುವಾಗಿ ಸದರಿ ಆದೇಶಗಳಲ್ಲಿನ ಆಸ್ಪತ್ರೆಗಳ ಪಟ್ಟಿಯಲ್ಲಿ ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ ಮತ್ತು ಸರ್ಕಾರಿ ಶುಶ್ರೂಷಾ ಮಹಾವಿದ್ಯಾಲಯ, ಬೆಂಗಳೂರು ಈ ಎರಡು ಸಂಸ್ಥೆಗಳು ಸೇರಿರುವುದಿಲ್ಲ. ಆದ್ದರಿಂದ ದಿನಾಂಕ: 17.11.1998 ಮತ್ತು 01.03.1999ರಲ್ಲಿ ಅನುಮೋದಿಸಿರುವ ಆಸ್ಪತ್ರೆಗಳ ಪಟ್ಟಿಯಲ್ಲಿ ಈ ಎರಡು ಸಂಸ್ಥೆಗಳನ್ನು ಸೇರಿಸಿ ಪರಿಷ್ಕೃತ ಸರ್ಕಾರಿ ಆದೇಶಕ್ಕಾಗಿ ಕೋರಿರುತ್ತಾರೆ.

3. ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 207 ಎಂಎಸ್‌ಎಫ್ 2005, ಬೆಂಗಳೂರು, ದಿನಾಂಕ: 16ನೇ ನವೆಂಬರ್, 2005**

4. ದಾವಣಗೆರೆಯ ಮಹಿಳೆಯರ ಮತ್ತು ಮಕ್ಕಳ ಆಸ್ಪತ್ರೆ ಹಾಗೂ ಬೆಂಗಳೂರಿನ ಶುಶ್ರೂಷಾ ಮಹಾವಿದ್ಯಾಲಯ ಈ ಎರಡು ಸಂಸ್ಥೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಆಕುಕ 462 ಎಂಎಸ್‌ಎಫ್ 97 ದಿನಾಂಕ: 01.03.1999ರಲ್ಲಿ ಸೇರಿಸಿಕೊಳ್ಳಲು ಆದೇಶಿಸಿದೆ. ಈ ಉದ್ದೇಶಕ್ಕೆ ಒದಗಿಸಿರುವ ಅನುದಾನದ ಮಿತಿಯಲ್ಲಿಯೇ ವೆಚ್ಚವನ್ನು ಭರಿಸತಕ್ಕದ್ದು.

5. ದಿನಾಂಕ: 28.10.2005 ಸಂಖ್ಯೆ: ಆಇ 1899 ವೆಚ್ಚ:5/ 2005ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್.1666

**ವಿಷಯ :** ಮೈಸೂರು ವೈದ್ಯಕೀಯ ಕಾಲೇಜಿನ ಅರವಳಿಕೆ ಶಾಸ್ತ್ರ ಉಪನ್ಯಾಸಕಿ ಡಾ: ಆರ್. ಪೂರ್ಣಿಮಾ ರವರಿಗೆ ಶಸ್ತ್ರ ಚಿಕಿತ್ಸಾ ಶಾಸ್ತ್ರಕ್ಕೆ ವಿಷಯ ಬದಲಾವಣೆ.

**ಓದಲಾಗಿದೆ :** 1. ದಿನಾಂಕ: 24.06.2004ರ ಮೈಸೂರು ವೈದ್ಯಕೀಯ ಮಹಾ ವಿದ್ಯಾಲಯದ ಅರವಳಿಕೆ ಉಪನ್ಯಾಸಕಿ ಡಾ: ಆರ್. ಪೂರ್ಣಿಮರವರ ಅರ್ಜಿ.

2. ದಿನಾಂಕ: 24.01.2005 ಸಂಖ್ಯೆ: ಎಸ್‌ಆರ್‌ಓ (2) 21:2004-05, ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1. ಮೈಸೂರು ವೈದ್ಯಕೀಯ ಕಾಲೇಜಿನ ಅರವಳಿಕೆ ಶಾಸ್ತ್ರ ಉಪನ್ಯಾಸಕಿ ಡಾ: ಆರ್. ಪೂರ್ಣಿಮ ದಿನಾಂಕ: 02.02.2001 ಸಂಖ್ಯೆ: ಆಕುಕ 119 ಎಂಸಿಎಲ್ 2000ರ ಅಧಿಸೂಚನೆಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡು ನೇಮಕಗೊಂಡಿದ್ದಾರೆ. ಅವರು ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದು, ಅರವಳಿಕೆ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿಲ್ಲ, ಆದ್ದರಿಂದ ಅರವಳಿಕೆ ಶಾಸ್ತ್ರ ವಿಷಯದಿಂದ ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಷಯಕ್ಕೆ ವಿಷಯ ಬದಲಾವಣೆ ನೀಡಲು ದಿನಾಂಕ: 24.06.2004ರ ಅರ್ಜಿಯಲ್ಲಿ ಕೋರಿದ್ದಾರೆ. ವಿಷಯ ಬದಲಾವಣೆಯನ್ನು

ಪುರಸ್ಕರಿಸಿದ್ದಲ್ಲಿ ಶಸ್ತ್ರ ಚಿಕಿತ್ಸಾ ಉಪನ್ಯಾಸಕರ ಜೇಷ್ಠತಾ ಪಟ್ಟಿಯಲ್ಲಿ ಕಡೇ ಸ್ಥಾನದಲ್ಲಿ ಜೇಷ್ಠತೆ ಪಡೆಯಲು ಒಪ್ಪಿ ಛಾಪಾ ಕಾಗದದಲ್ಲಿ ಕರಾರು ಬರೆದು ಕೊಟ್ಟಿರುತ್ತಾರೆ. ಅವರ ಮನವಿಯನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಶಿಫಾರಸ್ಸು ಮಾಡಿ ಕಳುಹಿಸಿದ್ದಾರೆ.

2. ಡಾ: ಆರ್. ಪೂರ್ಣಿಮಾ ರವರು ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದು, ವಿಷಯ ಬದಲಾವಣೆ ಪಡೆಯಲು ಅವಕಾಶವಿರುವುದರಿಂದ ಅವರಿಗೆ ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಷಯಕ್ಕೆ ಉಪನ್ಯಾಸಕರಾಗಿ ವಿಷಯ ಬದಲಾವಣೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 16(ಎ) (11)ನೇ ನಿಯಮದಡಿ ಹಾಗೂ 1957ರ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 6ನೇ ನಿಯಮದ ಉಪಬಂಧಗಳ ಬೆಳಕಿನಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 64 ಎಂಎಂಸಿ 2005, ಬೆಂಗಳೂರು, ದಿನಾಂಕ: 14ನೇ ನವೆಂಬರ್, 2005**

3. ಮೈಸೂರು ವೈದ್ಯಕೀಯ ಮಹಾ ವಿದ್ಯಾಲಯದ ಅರವಳಿಕೆ ಶಾಸ್ತ್ರ ಉಪನ್ಯಾಸಕಿ ಡಾ: ಆರ್. ಪೂರ್ಣಿಮಾ ರವರಿಗೆ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 16(ಎ) (11)ನೇ ನಿಯಮದಡಿ ಅರವಳಿಕೆ ಶಾಸ್ತ್ರ ವಿಷಯದಿಂದ ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಷಯಕ್ಕೆ ವಿಷಯ ಬದಲಾವಣೆ ನೀಡಿ ಮೈಸೂರು ವೈದ್ಯಕೀಯ ಮಹಾ ವಿದ್ಯಾಲಯದಲ್ಲಿ ಶಸ್ತ್ರ ಚಿಕಿತ್ಸಾ ಶಾಸ್ತ್ರ ವಿಭಾಗದಲ್ಲಿ ಶಸ್ತ್ರ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರ ಹುದ್ದೆಯಲ್ಲಿ ನೇಮಿಸಿದೆ.

4. ಈ ವಿಷಯ ಬದಲಾವಣೆಯನ್ನು ಅವರ ಕೋರಿಕೆಯ ಮೇರೆಗೆ ಮಾಡಿರುವುದರಿಂದ ಅವರ ಜೇಷ್ಠತೆಯನ್ನು 1957ರ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಾವಳಿಯ 6ನೇ ನಿಯಮದ ಒಂದನೇ ಪರಂತುವಿನ ಪ್ರಕಾರ ಈಗ ಹಾಲಿ ಶಸ್ತ್ರ ಚಿಕಿತ್ಸಾ ಶಾಸ್ತ್ರ ಉಪನ್ಯಾಸಕರುಗಳ ಕೆಳಗೆ ನಿಗದಿಪಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್.1672

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಕೃಷಿ ವಿಶ್ವವಿದ್ಯಾಲಯ ಧಾರವಾಡ ಹಾಗೂ ಬೆಂಗಳೂರುಗಳಲ್ಲಿ ಕರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್ (ಸಿಎಎಸ್) 1986ರ ಬದಲಿಗೆ ಮೆರಿಟ್ ಅಪ್‌ಗ್ರೇಡೆಷನ್ ಸ್ಕೀಮ್ (ಎಂಯುಎಸ್) ಹಾಗೂ ಟೈಂ ಬೌಂಡ್ ಪ್ರಮೋಷನ್ (ಟಿಬಿಪಿ) ಸ್ಕೀಮ್‌ಗಳಡಿ ಅನುಕ್ರಮವಾಗಿ ಸಹಾಯಕ ಪ್ರಾಧ್ಯಾಪಕ ಹುದ್ದೆಯಿಂದ ಸಹ ಪ್ರಾಧ್ಯಾಪಕ ಹುದ್ದೆಗೆ ಹಾಗೂ ಸಹ ಪ್ರಾಧ್ಯಾಪಕ ಹುದ್ದೆಯಿಂದ ಪ್ರಾಧ್ಯಾಪಕ ಹುದ್ದೆಗೆ ಪರಿನಿಯಮಗಳಡಿ ವಿಶ್ವವಿದ್ಯಾಲಯದ ನೀಡಿದ ಬಡ್ತಿಗಳನ್ನು ಒಪ್ಪಿ ಸ್ಥಿರೀಕರಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ: ಎಹೆಚ್‌ಡಿ 249 ಎಯುಎಂ 90, ದಿನಾಂಕ: 05.02.1993.
2. ಸರ್ಕಾರದ ಪತ್ರ ಸಂಖ್ಯೆ: ಎಹೆಚ್‌ಡಿ 241 ಎಯುಎಂ 90 ದಿನಾಂಕ: 26.02.1993.
3. ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ದಿನಾಂಕ: 13.11.2003.
4. ಕೃಷಿ ವಿಶ್ವವಿದ್ಯಾಲಯ ಧಾರವಾಡ ಇವರ ಪತ್ರ ಸಂಖ್ಯೆ: ಆರ್. Rectt: TBP:MUS:2003-90-c ದಿನಾಂಕ: 09.05.2003.
5. ಕೃಷಿ ವಿಶ್ವವಿದ್ಯಾಲಯ ಬೆಂಗಳೂರು ಇವರ ಪತ್ರ ದಿನಾಂಕ: ಸಿ:ಸಿಎಎಸ್: ಯುಎಎಸ್‌ಬಿ: 2004-05 ದಿನಾಂಕ: 09.07.2004 ಮತ್ತು 07.06.2005.
6. ಶಿಕ್ಷಕರ ಸಂಘ, ಕೃಷಿ ವಿಶ್ವವಿದ್ಯಾಲಯ ಧಾರವಾಡ ಬೆಂಗಳೂರು ಇವರ ಮನವಿ ದಿನಾಂಕ: 29.10.2004.
7. ಮಾನ್ಯ ಕೃಷಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ದಿನಾಂಕ: 05.07.2005.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1) ಮತ್ತು (2)ರಲ್ಲಿ ಹೊರಡಿಸಲಾದ ಪತ್ರಗಳನ್ವಯ ಹಾಗೂ (3)ರಲ್ಲಿ ಓದಲಾದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 13.11.2003ರಂದು ಜರುಗಿದ ಸಭೆಯಲ್ಲಿ ಈ ಕೆಳಕಂಡ ತೀರ್ಮಾನ ಕೈಗೊಳ್ಳಲಾಗಿದೆ.

1986 ಮತ್ತು 1996ರ ವೃತ್ತಿಪರ ಬಡ್ತಿ ಯೋಜನೆಗಳು ಜಾರಿಗೆ ಬಂದ ದಿನಾಂಕದಿಂದ ಕಡ್ಡಾಯವಾಗಿ ಈ ಯೋಜನೆಗಳನ್ವಯ ಮುಂಬಡ್ತಿ ನೀಡಿದಲ್ಲಿ ಉಂಟಾಗುವ ಸೇವಾ ಮತ್ತು ಆರ್ಥಿಕ ಪರಿಣಾಮಗಳ ಬಗ್ಗೆ ಸವಿವರವಾದ ವರದಿಯನ್ನು ತಯಾರಿಸುವಂತೆ ಕೃಷಿ ವಿಶ್ವವಿದ್ಯಾನಿಲಯಗಳಿಗೆ ನಿರ್ದೇಶಿಸಲಾಗಿದೆ. ಈ ವರದಿಯನ್ನು ತಯಾರಿಸುವಾಗ ವೃತ್ತಿಪರ ಬಡ್ತಿ ಯೋಜನೆ 1986 ಮತ್ತು 1996ರನ್ವಯ ಅವಶ್ಯವಾದ ಅರ್ಹತೆಗಳನ್ನು ಹೊಂದಿರದ, ಮುಂಬಡ್ತಿಗೆ ಅರ್ಹರಲ್ಲದ ಶಿಕ್ಷಕರ ಪ್ರಕರಣಗಳನ್ನು ಸಹ ಗುರುತಿಸುವಂತೆ ಸೂಚಿಸಿದರು. ಒಂದು ಸಾರಿ ವೃತ್ತಿಪರ ಬಡ್ತಿ ಯೋಜನೆ 86 ಮತ್ತು 96ರ ನಿಗದಿತ ದಿನಾಂಕಗಳನ್ವಯ ಈ ಯೋಜನೆಯನ್ನು ಜಾರಿಗೊಳಿಸುವ ಬಗ್ಗೆ ಸೇವಾ ಮತ್ತು ಆರ್ಥಿಕ ಪರಿಣಾಮಗಳನ್ನು ಗುರುತಿಸಿದರೆ ಸರ್ಕಾರವು ಸೂಕ್ತ ತೀರ್ಮಾನ ಕೈಗೊಳ್ಳಲು ಸಾಧ್ಯವಾಗುವುದೆಂದು ತಿಳಿಸುತ್ತಾ, ಮೇಲೆ ಸೂಚಿಸಿರುವಂತೆ ನವೆಂಬರ್ 2003ರ ಅಂತ್ಯದೊಳಗೆ ಕ್ರಮ ಕೈಗೊಂಡು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲಾಗುವುದೆಂದು ಎರಡು ಕೃಷಿ ವಿಶ್ವವಿದ್ಯಾಲಯಗಳ ಉಪ ಕುಲಪತಿಗಳು ಸಮ್ಮತಿಸಿದರು.

ಕ್ರಮ ಸಂಖ್ಯೆ: (4) ಮತ್ತು (5)ರಲ್ಲಿ ಓದಲಾದ ವರದಿಯಲ್ಲಿ ಕುಲಸಚಿವರು ಕೃಷಿ ವಿಶ್ವವಿದ್ಯಾಲಯ, ಧಾರವಾಡ ಹಾಗೂ ಬೆಂಗಳೂರು ಇವರು ಸರ್ಕಾರದ ಪತ್ರ ಸಂಖ್ಯೆ: ಎಹೆಚ್‌ಡಿ 241 ಎಯುಎಂ 90 ದಿನಾಂಕ:26.02.1993ರ ಪ್ರಕಾರ ಹಾಗೂ ಎಹೆಚ್‌ಡಿ 249 ಎಯುಎಂ 90 ದಿನಾಂಕ: 05.02.1993 ಮತ್ತು ಕೃಷಿ ವಿಶ್ವವಿದ್ಯಾಲಯ ಪರಿನಿಯಮ 29 (ix) ಅಡಿ ಟೈಬೌಂಡ್ ಪ್ರಮೋಷನ್ಸ್ ಸ್ಕೀಮ್ (ಟಿಬಿಪಿ) ಹಾಗೂ 29 (xi) ಅಡಿ ಮೆರಿಟ್ ಅಪ್‌ಗ್ರೇಡೇಷನ್ ಸ್ಕೀಮ್‌ಗಳನ್ನು (ಎಂಯುಎಸ್) ದಿನಾಂಕ: 01.02.1988 ರಿಂದ 01.11.1999ರವರೆಗೆ ಅನುಕ್ರಮವಾಗಿ ಸಹಾಯಕ ಪ್ರಾಧ್ಯಾಪಕರ ಹುದ್ದೆಯಿಂದ ಸಹ ಪ್ರಾಧ್ಯಾಪಕ ಹುದ್ದೆಗೆ ಮತ್ತು ಸಹ ಪ್ರಾಧ್ಯಾಪಕ ಹುದ್ದೆಯಿಂದ ಪ್ರಾದ್ಯಾಪಕ ಹುದ್ದೆಗೆ ನೀಡಿರುವ ಬಡ್ತಿಗಳನ್ನು ಒಪ್ಪಿ ಸ್ಥಿರೀಕರಿಸಲು ಆಡಳಿತ ಮಂಡಳಿಯು ಸರ್ವಾನುಮತದಿಂದ ನಿರ್ಧಾರ ತೆಗೆದುಕೊಂಡಿದ್ದು, ಈ ಕುರಿತು ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಶಿಕ್ಷಕರ ಸಂಘ, ಕೃಷಿ ವಿಶ್ವವಿದ್ಯಾನಿಲಯ ಧಾರವಾಡ ಇವರು ಸರ್ಕಾರದ ಪತ್ರ ಹಾಗೂ ವಿಶ್ವವಿದ್ಯಾಲಯದ ಪರಿನಿಯಮ ಹಾಗೂ ಆಡಳಿತ ಮಂಡಳಿಯ ಒಪ್ಪಿಗೆ ಹೀಗೆ ನ್ಯಾಯಯುತ ಪ್ರಕ್ರಿಯೆಗಳಿಂದ ನೀಡಲಾದ ಬಡ್ತಿಗಳನ್ನು ಹಾಗೂ 01.11.1999ಕ್ಕೆ ಅರ್ಹತೆ

ಹೊಂದಿದ್ದ ವಿವಿಧ ಹಂತಗಳಲ್ಲಿರುವ ಬಡ್ತಿಗಳನ್ನು ಒಪ್ಪಿ ಸ್ಥಿರೀಕರಿಸಲು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಹಾಗೂ ಶಿಕ್ಷಕರ ಸಂಘ ಕೃಷಿ ವಿಶ್ವವಿದ್ಯಾನಿಲಯ ಬೆಂಗಳೂರು ಇವರು ಸಹ ಸರ್ಕಾರದ ಪತ್ರ ಹಾಗೂ ಪರಿನಿಯಮಗಳನ್ವಯ 13.01.2000ರವರೆಗೆ ನೀಡಿರುವ ಬಡ್ತಿಗಳನ್ನು ಹಾಗೂ 13.01.2000ಕ್ಕೆ ಅರ್ಹತೆ ಹೊಂದಿರುವ ವಿವಿಧ ಹಂತಗಳಲ್ಲಿರುವ ಬಡ್ತಿಗಳನ್ನು ಒಪ್ಪಿ ಸ್ಥಿರೀಕರಿಸುವಂತೆ ಕೋರಿದ್ದಾರೆ.

ಕ್ರಮ ಸಂಖ್ಯೆ: (7)ರಲ್ಲಿ ಓದಲಾದ ದಿನಾಂಕ: 05.07.2005ರಂದು ಕೃಷಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಜರುಗಿದ್ದು, ಈ ಸಭೆಯಲ್ಲಿ ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವರು ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆಯವರು ಪಾಲ್ಗೊಂಡು ಚರ್ಚಿಸಿ ಎರಡು ವಿಶ್ವವಿದ್ಯಾಲಯಗಳಲ್ಲಿ ವಿಶ್ವವಿದ್ಯಾಲಯದ ಪರಿನಿಯಮಗಳಡಿ ಹಾಗೂ ಸರ್ಕಾರದ ಪತ್ರ ಸಂಖ್ಯೆ: ಎಹೆಚ್‌ಡಿ 241 ಎಯುಎಂ 90 ದಿನಾಂಕ: 26.02.1993ಕ್ಕೆ ಅನುಗುಣವಾಗಿ ನೀಡುವ ಬಡ್ತಿಗಳನ್ನು ಧಾರವಾಡ ಕೃಷಿ ವಿಶ್ವವಿದ್ಯಾನಿಲಯಕ್ಕೆ ಅನ್ವಯಿಸುವಂತೆ ದಿನಾಂಕ: 01.11.1999 ತನಕ ಹಾಗೂ ಸರ್ಕಾರದ ಪತ್ರ ಸಂಖ್ಯೆ: ಎಹೆಚ್‌ಡಿ 249 ಎಯುಎಂ 90 ದಿನಾಂಕ: 05.02.1993ರನ್ವಯ ಬೆಂಗಳೂರು ವಿಶ್ವವಿದ್ಯಾಲಯಕ್ಕೆ 13.01.2000 ತನಕ ಮೆರಿಟ್ ಅಪ್‌ಗ್ರೇಡೇಷನ್ ಸ್ಕೀಮ್ ಹಾಗೂ ಟೈಂಬೌಂಡ್ ಪ್ರಮೋಷನ್ ಸ್ಕೀಮ್ ಅಡಿಯಲ್ಲಿ ನೀಡಿದ ಬಡ್ತಿಗಳನ್ನು ಒಪ್ಪಿ ಸ್ಥಿರೀಕರಿಸುವ ನಿರ್ಣಯ ತೆಗೆದುಕೊಂಡು ಪ್ರಸ್ತಾವನೆಯನ್ನು ಅನುಮೋದನೆಗಾಗಿ ಆರ್ಥಿಕ ಇಲಾಖೆಗೆ ಕಳುಹಿಸುವಂತೆ ತೀರ್ಮಾನಿಸಲಾಯಿತು. ಆರ್ಥಿಕ ಇಲಾಖೆಯು ಕೆಲವು ಷರತ್ತುಗಳೊಂದಿಗೆ ಈ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ. ಸರ್ಕಾರವು ಈ ವಿಷಯ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 99 ಕೃವಿವಿ 2000, ಬೆಂಗಳೂರು, ದಿನಾಂಕ: 17ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಸರ್ಕಾರವು ಧಾರವಾಡ ಕೃಷಿ ವಿಶ್ವವಿದ್ಯಾಲಯದಲ್ಲಿ ಕರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್ (ಸಿಎಎಸ್) 1986ರ ಬದಲಿಗೆ ಮೆರಿಟ್ ಅಪ್‌ಗ್ರೇಡೇಷನ್ ಸ್ಕೀಮ್ (ಎಂಯುಎಸ್) ಹಾಗೂ ಟೈಂಬೌಂಡ್ ಪ್ರಮೋಷನ್ ಸ್ಕೀಮ್ (ಟಿಬಿಪಿ) ಗಳಡಿ 01.11.1999 ರವರೆಗೆ ಮತ್ತು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದಲ್ಲಿ ದಿನಾಂಕ: 13.01.2000ರವರೆಗೆ ನೀಡಿದ ಬಡ್ತಿಗಳನ್ನು ಅದಕ್ಕೆ ತಗಲುವ ಹೆಚ್ಚುವರಿ ವೆಚ್ಚಕ್ಕೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಬಾರದೆಂದು ಹಾಗೂ ಕೃಷಿ ವಿಶ್ವವಿದ್ಯಾನಿಲಯಗಳಿಗೆ ನೀಡಲಾಗಿರುವ ಅನುದಾನದಲ್ಲಿಯೇ ಭರಿಸತಕ್ಕದೆಂಬ ಷರತ್ತಿಗೆ ಒಳಪಟ್ಟು ಸ್ಥಿರೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 99 ವೆಚ್ಚ 4/ 2005 ದಿನಾಂಕ: 10.11.2005ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್.1673

## ಶಿಕ್ಷಣ ಸಚಿವಾಲಯ

**ವಿಷಯ :** ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ಶಾಲೆಗಳು ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಗಿರಿಜನ ಹಾಗೂ ಬಡತನ ರೇಖೆಯ ಕೆಳಗಿರುವ ಶಾಲಾ ಮಕ್ಕಳಲ್ಲಿ ಕಬ್ಬಿಣಾಂಶ ಮತ್ತು ಅಯೋಡಿನ್ ಕೊರತೆ ಕುರಿತು ಸಂಶೋಧನೆ ನಡೆಸುವ ಬಗ್ಗೆ.

**ಓದಲಾಗಿದೆ :**

1. ಡೀನ್, ಸೆಂಟ್ ಜಾನ್ಸ್ ಅಕ್ಯಾಡೆಮಿ ಆಫ್ ಹೆಲ್ತ್ ಸೈನ್ಸಸ್, ಬೆಂಗಳೂರು ಅವರ ಪತ್ರದ ದಿನಾಂಕ: 14.06.2005.
2. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರ ಪತ್ರದ ಸಂಖ್ಯೆ: ಪೌಆಕ/ 12/ 2004-05, ದಿನಾಂಕ: 08.08.2005.
3. ಸಹ ನಿರ್ದೇಶಕರು (ಮ.ಉ.ಯೋ) ಸಾ.ಶಿ.ಇ, ಬೆಂಗಳೂರು ಅವರ ಪತ್ರದ ಸಂಖ್ಯೆ: ಎಂ2/ ಅ.ದಾ.ಇತರೆ 31/ 12/ 2005-06.

**ಪ್ರಸ್ತಾವನೆ:**

ಡೀನ್, ಇನ್ಸ್‌ಟ್ಯೂಟ್ ಆಫ್ ಪಾಪ್ಯುಲೇಶನ್ ಹೆಲ್ತ್, ಸೇಂಟ್ ಜಾನ್ಸ್ ಅಕಾಡೆಮಿ ಆಫ್ ಹೆಲ್ತ್ ಸೈನ್ಸಸ್, ಬೆಂಗಳೂರು ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 14.06.2005ರ ತಮ್ಮ ಪತ್ರದಲ್ಲಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕಿನ ಕೂಗೂರು, ತಿಂಡ್ಲು, ಮುಗಳೂರ್ ಗ್ರಾಮಗಳ ಶಾಲಾ ಮಕ್ಕಳಲ್ಲಿ ಕಬ್ಬಿಣ ಹಾಗೂ ಅಯೋಡಿನ್ ಮಿಶ್ರಿತ ಉಪ್ಪಿನ ಉಪಯುಕ್ತತೆ ಬಗ್ಗೆ ಸಂಶೋಧನೆ ನಡೆಸಲು ಕೋರಿದ್ದಾರೆ. ಈ ಬಗ್ಗೆ ಪರಿಶೀಲಿಸಿದ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 08.08.2005ರ ತಮ್ಮ ಪತ್ರದಲ್ಲಿ ಕಬ್ಬಿಣಾಂಶ ಮತ್ತು ಅಯೋಡಿನ್ ಕೊರತೆಯ ಸಂಶೋಧನೆ ನಡೆಸಲು ಆನೇಕಲ್ ತಾಲ್ಲೂಕಿನ ಶಾಲೆಗಳಿಗಿಂತಲೂ ಗುಡ್ಡಗಾಡುಗಳಲ್ಲಿ ವಾಸಿಸುತ್ತಿರುವ ಗಿರಿಜನರ ಪ್ರದೇಶದ ಬಡತನ ರೇಖೆಗಿಂತ ಕೆಳಗಿರುವ ಶಾಲಾ ಮಕ್ಕಳಲ್ಲಿ ಈ ಸಂಶೋಧನೆ ನಡೆಸಿ ಫಲಿತಾಂಶ ತಿಳಿಯಬೇಕಾದದ್ದು ಹೆಚ್ಚು ಉಪಯುಕ್ತವೆನಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಎರಡು ವಿಷಯಗಳನ್ನು ಪರಿಶೀಲಿಸಿದ ಸಹ ನಿರ್ದೇಶಕರು (ಮ.ಉ.ಯೋ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 30.09.2005ರ ತಮ್ಮ ಪತ್ರದಲ್ಲಿ ಆನೇಕಲ್ ತಾಲ್ಲೂಕಿನ ಶಾಲೆಗಳು ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಗಿರಿಜನ ಹಾಗೂ ಬಡತನ ರೇಖೆಯ ಕೆಳಗೆ ಇರುವ ಶಾಲಾ ಮಕ್ಕಳಲ್ಲಿ ಕಬ್ಬಿಣಾಂಶ ಮತ್ತು ಅಯೋಡಿನ್ ಕೊರತೆ ಕುರಿತು ಸಂಶೋಧನೆ ನಡೆಸಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 63 ಎಂಎಂಎಸ್ 2005, ಬೆಂಗಳೂರು, ದಿನಾಂಕ: 28ನೇ ನವೆಂಬರ್, 2005**

**[ಇಡಿ 73 ಸ್ವೀಮರ (ಯೂನಿಕ್) 2005, ದಿನಾಂಕ: 28.11.2005]**

ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕಿನಲ್ಲಿನ ಕೂಗೂರು, ತಿಂಡ್ಲು ಮತ್ತು ಮುಗಳೂರು ಗ್ರಾಮಗಳಲ್ಲಿರುವ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಶಾಲಾ ಮಕ್ಕಳು ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಗಿರಿಜನ ಹಾಗೂ ಬಡತನ ರೇಖೆಯ ಕೆಳಗೆ ಇರುವ ಶಾಲಾ ಮಕ್ಕಳಲ್ಲಿ ಕಬ್ಬಿಣಾಂಶ ಮತ್ತು ಅಯೋಡಿನ್ ಕೊರತೆಯ ಬಗ್ಗೆ ಪ್ರಾಯೋಗಿಕವಾಗಿ ಸಂಶೋಧನೆಯನ್ನು ಸೆಂಟ್ ಜಾನ್ಸ್ ನ್ಯಾಷನಲ್ ಅಕ್ಯಾಡೆಮಿ ಆಫ್ ಹೆಲ್ತ್ ಸೈನ್ಸಸ್, ಸರ್ಜಾಪುರ ರಸ್ತೆ, ಬೆಂಗಳೂರು ಈ ಸಂಸ್ಥೆಯವರು ಕೈಗೊಳ್ಳಲು ಈ ಮೂಲಕ ಅನುಮತಿ ನೀಡಿದೆ. ಈ ಅನುಮತಿಯನ್ನು ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಮಾಡಿರುವ ಶಿಫಾರಸ್ಸಿನ ಆಧಾರದ ಮೇಲೆ ನೀಡಲಾಗಿದೆ. ಈ ಸಂಶೋಧನೆಗೆ ಸಂಬಂಧಿಸಿದ ವೆಚ್ಚವನ್ನು ಸಂಶೋಧನೆ ನಡೆಸುವ ಸಂಸ್ಥೆಯೇ ಭರಿಸತಕ್ಕದ್ದು.

ಸಂಶೋಧನೆ ಮುಕ್ತಾಯವಾದ ನಂತರ ಸಂಶೋಧನಾ ವರದಿಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.1674

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ.

**ವಿಷಯ :** ಯುನೈಟೆಡ್ ಸ್ಕೂಲ್ ಆರ್‌ಗನೈಜೇಶನ್ ಆಫ್ ಇಂಡಿಯಾಗೆ ರಾಜ್ಯ ಸರ್ಕಾರದಿಂದ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು ಯುನೈಟೆಡ್ ಸ್ಕೂಲ್ ಆರ್‌ಗನೈಜೇಶನ್ ಆಫ್ ಇಂಡಿಯ ಇವರ ಪತ್ರ ಸಂಖ್ಯೆ: ಸಿಎಂ.919, GOI / 2005 ದಿನಾಂಕ: 08.08.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ 53ನೇ ಸಾಮಾನ್ಯ ಸಮ್ಮೇಳನವನ್ನು ಹಾಗೂ ಶಾಲಾ ಉತ್ಸವವನ್ನು ವಾರಾಂಗಲ್ (ಆಂಧ್ರ ಪ್ರದೇಶ)ದಲ್ಲಿ ದಿನಾಂಕ: 5ನೇ ಅಕ್ಟೋಬರ್ 2005 ರಿಂದ 8ನೇ ಅಕ್ಟೋಬರ್ 2005ರ ವರೆಗೆ ನಡೆಸಲು ತೀರ್ಮಾನಿಸಿದ್ದು, ಇದರಲ್ಲಿ ರಾಜ್ಯದಿಂದ 450 ವಿದ್ಯಾರ್ಥಿಗಳು ಮತ್ತು ಶಿಕ್ಷಕರುಗಳು ಭಾಗವಹಿಸುವುದಾಗಿ ತಿಳಿಸಿರುತ್ತಾರೆ.

ಈ ವೆಚ್ಚಕ್ಕಾಗಿ ಒಟ್ಟು ರೂ.4,10,000/ ತಗಲುವುದಾಗಿ ಇದರ ಅನುದಾನವಾಗಿ ಕರ್ನಾಟಕ ಸರ್ಕಾರದಿಂದ ಅಡ್‌ಹಾಕ್ ಗ್ರಾಂಟ್ ಆಗಿ ರೂ.5,000/- ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 311 ಯೋಯೋಕ 2005, ಬೆಂಗಳೂರು, ದಿನಾಂಕ: 26ನೇ ನವೆಂಬರ್, 2005**

**[ಇಡಿ 74 ಸ್ಕೀಮರ (ಯೂನಿಕ್) 2005, ದಿನಾಂಕ: 26.11.2005]**

2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2202-02-001-0-03-051 (ಯೋಜನೇತರ) ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಒದಗಿಸಿರುವ ಅನುದಾನ ರೂ.22.32 ಲಕ್ಷಗಳಲ್ಲಿ ಆಂಧ್ರ ಪ್ರದೇಶದ ವಾರಂಗಲ್‌ನಲ್ಲಿ 53ನೇ ಸಾಮಾನ್ಯ ಸಮ್ಮೇಳನದಲ್ಲಿ ಭಾಗವಹಿಸುವ ವಿದ್ಯಾರ್ಥಿಗಳು ಹಾಗೂ ಶಿಕ್ಷಕರುಗಳ ಖರ್ಚು ವೆಚ್ಚಕ್ಕಾಗಿ ಕರ್ನಾಟಕ ಸರ್ಕಾರದಿಂದ ರೂ.5,000/- (ರೂ.ಐದು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡುತ್ತದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ. ಸಂಖ್ಯೆ: ಇಡಿ 710 ಐಎಫ್ (ಬಿಎ) 2005 ದಿನಾಂಕ:15.11.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್.1675

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ.

**ವಿಷಯ :** ಉಚಿತ ಸಮವಸ್ತ್ರ ಸರಬರಾಜು ಮಾಡಿದ ಸಂಸ್ಥೆಗಳಿಗೆ ಹಣ ಪಾವತಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಆಇ 1746/ ವೆಚ್ಚ-6/ 2005 ದಿನಾಂಕ: 22.10.2005.
2. ಸರ್ಕಾರಿ ಆದೇಶ ಸಂಖ್ಯೆ: ಆಇ/ 1746/ ವೆಚ್ಚ-6/ 2005 ದಿನಾಂಕ: 28.10.2005.
3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಯೋ (1) ಖಜಾನೆ. ಗಂ.04/ 2005-06 ದಿನಾಂಕ: 17.11.2005.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ದಿನಾಂಕ:22.10.2005 ಹಾಗೂ 28.10.2005ರ ಸರ್ಕಾರಿ ಆದೇಶಗಳಲ್ಲಿ ವಿದ್ಯಾವಿಕಾಸ ಯೋಜನೆಯಡಿ ಉಚಿತ ಸಮವಸ್ತ್ರ ಸರಬರಾಜು ಮಾಡಿದ ಸಂಸ್ಥೆಗಳಿಗೆ ಪಾವತಿ ಮಾಡಲು ರೂ.2737.31 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2202-01-197-1-01 (ಯೋಜನೆ) ಅಡಿಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರಿಗೆ ಬಿಡುಗಡೆ ಮಾಡಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 17.11.2005ರ ತಮ್ಮ ಪತ್ರದಲ್ಲಿ ಸದರಿ ಮೊತ್ತವನ್ನು ಅವರಿಂದ ಗಣಕೀಕರಣಗೊಳಿಸಿ ಸಂಸ್ಥೆಗಳಿಗೆ ಪಾವತಿಸಲು ಅನುಕೂಲವಾಗುವಂತೆ ಆಯುಕ್ತರಿಂದ ಅನುಷ್ಠಾನಗೊಳಿಸಲ್ಪಡುತ್ತಿರುವ ರಾಜ್ಯವಲಯದ ಯೋಜನಾ ಲೆಕ್ಕ ಶೀರ್ಷಿಕೆಯಡಿಯಲ್ಲಿ ಸದರಿ ಹಣವನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 343 ಯೋಯೋಕ 2005, ಬೆಂಗಳೂರು, ದಿನಾಂಕ: 28ನೇ ನವೆಂಬರ್, 2005**
**[ಇಡಿ 75 ಸ್ವೀಮರ (ಯೂನಿಕ್) 2005, ದಿನಾಂಕ: 28.11.2005]**

ಉಚಿತ ಸಮವಸ್ತ್ರ ಸರಬರಾಜು ಮಾಡಿದ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮಗಳಿಗೆ ಪಾವತಿ ಮಾಡುವ ಸಲುವಾಗಿ ಮೇಲೆ ಓದಲಾದ ದಿನಾಂಕ:22.10.2005 ಮತ್ತು 28.10.2005ರ ಆದೇಶಗಳಲ್ಲಿ ಅನುಮತಿಸಲಾದ 2737-31 ಲಕ್ಷ ರೂ.ಗಳನ್ನು (ಎರಡು ಸಾವಿರದ ಏಳುನೂರ ಮೂವತ್ತೇಳು ಲಕ್ಷದ ಮೂವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಹಂಚಿಕೆಮಾಡಲು ಸರ್ಕಾರವು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರಿಗೆ ಈ ಮೂಲಕ ಅಧಿಕಾರ ನೀಡುತ್ತದೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2202-01-109-0-03-221 (ಯೋಜನೆ)ರಲ್ಲಿ ಭರಿಸತಕ್ಕದ್ದು. ಈ ಮೊತ್ತವನ್ನು ಅಗತ್ಯತೆ ಮತ್ತು ಸಂಸ್ಥೆಗಳ ಬೇಡಿಕೆಗೆ ಅನುಗುಣವಾಗಿ ಹಂಚಿಕೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ.

ಪಿ.ಆರ್.1676

**ವಿಷಯ :** ಬೀದರ್‌ನ ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಛೇರಿ, ಕಟ್ಟಡದ ದುರಸ್ತಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಪ್ರಸ್ತಾವನೆ:**

ಸಾರ್ವಜನಿಕ ಶಿಕ್ಷಣ ಇಲಾಖೆ, ಅಧಿಕಾರಿಗಳು ಇತ್ತೀಚೆಗೆ ಬೀದರ್ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡ ಸಮಯದಲ್ಲಿ ಬೀದರ್ ನಗರದಲ್ಲಿರುವ ಸಾರ್ವಜನಿಕ ಶಿಕ್ಷಣ ಇಲಾಖೆ, ಉಪ ನಿರ್ದೇಶಕರ ಕಛೇರಿ ಕಟ್ಟಡವು ತುಂಬಾ ಶಿಥಿಲಾವಸ್ಥೆ ತಲುಪಿದ್ದು ದುರಸ್ತಿ ಕಾರ್ಯಮಾಡುವುದು ಅವಶ್ಯವೆಂದು ಕಂಡುಬಂದಿದೆ. ಈ ಅಗತ್ಯವನ್ನು ಮನಗಂಡ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 469 ಯೋಸಕ 2005, ಬೆಂಗಳೂರು, ದಿನಾಂಕ: 24ನೇ ನವೆಂಬರ್, 2005**
**[ಇಡಿ 72 ಸ್ವೀಮರ (ಯೂನಿಕ್) 2005, ದಿನಾಂಕ: 24.11.2005]**

ಸರ್ಕಾರವು ಬೀದರ್‌ನ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರ ಶಿಥಿಲಗೊಂಡ ಕಛೇರಿ ಕಟ್ಟಡದ ದುರಸ್ತಿಗಾಗಿ 2 ಲಕ್ಷ ರೂ.ಗಳನ್ನು (ಎರಡು ಲಕ್ಷರೂ.ಗಳು ಮಾತ್ರ) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೀದರ್ ಅವರಿಗೆ ಈ ಮೂಲಕ ಬಿಡುಗಡೆ ಮಾಡುತ್ತದೆ. ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2202-01-053-0-01-200 (ಯೋಜನೇತರ) ಅಡಿಯಲ್ಲಿ ನಿಗದಿಯಾಗಿರುವ ರೂ.1000 ಲಕ್ಷಗಳಲ್ಲಿ ಭರಿಸತಕ್ಕದ್ದು.

ಈ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಬೀದರ್ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳಿಗೆ ನೀಡಲಾಗಿದೆ. ಹಾಗೂ ಸದರಿ ಲೆಕ್ಕ ಶೀರ್ಷಿಕೆಯು ಜಿಲ್ಲಾ ಪಂಚಾಯತ್ ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿರುತ್ತದೆ.

ದುರಸ್ತಿ ಕಾಮಗಾರಿಯನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಿಂದ ಕೈಗೆತ್ತಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಡಿ 2003 ದಿನಾಂಕ: 12.06.2003ರಲ್ಲಿ ನೀಡಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ.

ಪಿ.ಆರ್.1677

**ವಿಷಯ :** 2005-06ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ರಾಜ್ಯವಲಯ ಮುಂದುವರೆದ ಯೋಜನಾ ಕಾರ್ಯಕ್ರಮಗಳಡಿ ಒದಗಿಸಲಾದ ಅನುದಾನವನ್ನು ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳಡಿ ಬಿಡುಗಡೆ ಮಾಡಿ ಕಾರ್ಯಕ್ರಮವನ್ನು ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಉಪನಿರ್ದೇಶಕರು (ಯೋಜನೆ) ಸಾ.ಶಿ.ಇ. ಇವರ ಪತ್ರ ಸಂಖ್ಯೆ: ಯೋ(1) ಮು.ಯೋ.ಕಂ.ಹ.ಬಿ.27/ 2004-05 ದಿನಾಂಕ: 16.07.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 16.07.2005ರ ಪತ್ರದಲ್ಲಿ 2005-06ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ರಾಜ್ಯ ವಲಯ ಮುಂದುವರಿಕೆ ಕಾರ್ಯಕ್ರಮಗಳಡಿ ಜಿಲ್ಲಾ ಪಂಚಾಯತ್ ಮೂಲಕ ಅನುಬಂಧ-1 ಮತ್ತು 2 ರಲ್ಲಿ ನಮೂದಿಸಿರುವಂತೆ ಅನುದಾನವನ್ನು ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳಡಿ ಅನುಷ್ಠಾನಗೊಳಿಸಲು ಅನುದಾನವನ್ನು ಬಿಡುಗಡೆ ಮಾಡಿ ಕಾರ್ಯಕ್ರಮವನ್ನು ವರ್ಗಾಯಿಸಲು ಕೋರಿರುತ್ತಾರೆ.

ಅನುಬಂಧ-1 ರಲ್ಲಿ ಆಯವ್ಯಯ ಲೆಕ್ಕಶೀರ್ಷಿಕೆ 2202-01-104-0-00 ಪರಿವೀಕ್ಷಣೆ (ಪ್ರಾಥಮಿಕ) ಅಡಿಯಲ್ಲಿ ನಿಗದಿಪಡಿಸಿರುವ ರೂ.40.00 ಲಕ್ಷಗಳಲ್ಲಿ 1994-95ರಿಂದ 1999-2000ನೇ ಸಾಲಿನಲ್ಲಿ ಮಂಜೂರಾಗಿದ್ದ ಯೋಜನೆಯಡಿ ಮುಂದುವರೆಯುತ್ತಿರುವ ವಾಹನಚಾಲಕರ ಹುದ್ದೆಗಳನ್ನು ಮುಂದುವರೆಸಿ ಅವರುಗಳಿಗೆ ವೇತನ ವೆಚ್ಚ ಭರಿಸಲು ಜಿಲ್ಲಾವಾರು ಆಯವ್ಯಯ ಹಂಚಿಕೆಮಾಡಿ ರೂ.5.00 ಲಕ್ಷಗಳನ್ನು ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳಿಗೆ ವಿಲೀನಗೊಳಿಸಿ ಜಿಲ್ಲಾ ವಲಯದಡಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ಅನುಬಂಧ-2ರಲ್ಲಿ ಆಯವ್ಯಯ ಲೆಕ್ಕಶೀರ್ಷಿಕೆ 2202-01-104-0-00 ಪರಿವೀಕ್ಷಣೆ (ಪ್ರಾಥಮಿಕ) ಅಡಿಯಲ್ಲಿ ನಿಗದಿಪಡಿಸಿರುವ ರೂ.40.00 ಲಕ್ಷಗಳಲ್ಲಿ ಹೊಸದಾಗಿ ಸೃಜಿಸಲಾಗಿರುವ ವಲಯಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮತ್ತು ಮ್ಯಾನೇಜರ್‌ಗಳ ಹುದ್ದೆಗಳನ್ನು ಮುಂದುವರೆಸಿ, ಅವರುಗಳಿಗೆ ವೇತನ, ವೆಚ್ಚ ಭರಿಸಲು ರೂ.30.29 ಲಕ್ಷಗಳನ್ನು ಬ್ಲಾಕುವಾರು ಹಂಚಿಕೆ ಮಾಡಲಾಗಿದೆಯೆಂದು ತಿಳಿಸುತ್ತಾ ಸದರಿ ಕಾರ್ಯಕ್ರಮವನ್ನು ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳಿಗೆ ವರ್ಗಾಯಿಸಿ, ಜಿಲ್ಲಾ ವಲಯದಡಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಉಪ ನಿರ್ದೇಶಕರು (ಯೋಜನೆ), ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 312 ಯೋಯೋಕಾ 2005, ಬೆಂಗಳೂರು, ದಿನಾಂಕ: 22ನೇ ನವೆಂಬರ್, 2005**
**[ಇಡಿ 70 ಸ್ವೀಮರ (ಯೂನಿಕ್) 2005, ದಿನಾಂಕ: 22.11.2005]**

2005-06ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2202-01-104-0-00 (ಯೋಜನೆ ಪರಿವೀಕ್ಷಣೆ ಅಡಿಯಲ್ಲಿ ರೂ.40.00 ಲಕ್ಷಗಳ (ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಒದಗಿಸಲಾಗಿದ್ದು ಈ ಅನುದಾನದಲ್ಲಿ 1994-95 ರಿಂದ 1999-2000ನೇ ಸಾಲಿನಲ್ಲಿ ಮಂಜೂರಾಗಿದ್ದ ಯೋಜನೆ ಅಡಿಯಲ್ಲಿ ಮುಂದುವರೆಯುತ್ತಿರುವ ಅನುಬಂಧ-1ರಲ್ಲಿ ನಮೂದಿಸಿರುವ ಜಿಲ್ಲೆಗಳಲ್ಲಿ ವಾಹನ ಚಾಲಕರ ಹುದ್ದೆಗಳನ್ನು ಮುಂದುವರೆಸಿ, ಅವರುಗಳಿಗೆ ವೇತನ, ವೆಚ್ಚ ಭರಿಸಲು ಜಿಲ್ಲಾವಾರು ಆಯವ್ಯಯ ಹಂಚಿಕೆಮಾಡಿ ರೂ.5.00 ಲಕ್ಷಗಳನ್ನು (ಐದು ಲಕ್ಷ ರೂಪಾಯಿಗಳು ಮಾತ್ರ) ತಾಲ್ಲೂಕು ಪಂಚಾಯತ್ ವಿಲೀನಗೊಳಿಸಿ ಜಿಲ್ಲಾವಲಯದಡಿ ಬಿಡುಗಡೆ ಮಾಡಲು ಹಾಗೂ ಹೊಸದಾಗಿ ಸೃಜಿಸಲಾಗಿರುವ ವಲಯಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮತ್ತು ಮ್ಯಾನೇಜರ್‌ಗಳ ಹುದ್ದೆಗಳನ್ನು ಅನುಬಂಧ-2ರಲ್ಲಿ ನಮೂದಿಸಿರುವ ಜಿಲ್ಲೆಗಳಲ್ಲಿ ಮುಂದುವರೆಸಿ, ಅವರುಗಳಿಗೆ ವೇತನ, ವೆಚ್ಚ ಭರಿಸಲು ಸದರಿ ಲೆಕ್ಕ ಶೀರ್ಷಿಕೆಯಲ್ಲಿಯೇ ರೂ.30.29 ಲಕ್ಷಗಳನ್ನು (ಮೂವತ್ತು ಲಕ್ಷದ ಇಪ್ಪತ್ತೊಂಬತ್ತು ಸಾವಿರಗಳು ಮಾತ್ರ) ತಾಲ್ಲೂಕು ಪಂಚಾಯತ್ ಕಾರ್ಯಕ್ರಮಗಳಿಗೆ ವರ್ಗಾಯಿಸಿ ಜಿಲ್ಲಾ ವಲಯದಡಿ ಅನುದಾನವನ್ನು ಬಿಡುಗಡೆ ಮಾಡಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ. ಸಂಖ್ಯೆ: ಶಿಇ 711 ಐಎಫ್ (ಬಿಎ) 2005ದ ದಿನಾಂಕ: 15.11.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 312 ಯೋಯೋಕಾ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005ಕ್ಕೆ ಅನುಬಂಧ**
**[ಇಡಿ 70 ಸ್ವೀಮರ (ಯೂನಿಕ್) 2005, ದಿನಾಂಕ: 23.11.2005]**

**ಅನುಬಂಧ-1**

(1) ರಾಜ್ಯವಲಯ ಯೋಜನೆಯಡಿ ಮುಂದುವರೆಯುತ್ತಿರುವ ವಾಹನ ಚಾಲಕರ ಹುದ್ದೆಗಳಿಗೆ ವೇತನ ವೆಚ್ಚವನ್ನು ಭರಿಸಲು ಜಿಲ್ಲಾವಾರು ಅನುದಾನ ಹಂಚಿಕೆ.

ಲೆಕ್ಕ ಶೀರ್ಷಿಕೆ: 2202-01-104-0-00 ಪರಿವೀಕ್ಷಣೆ (ಪ್ರಾಥಮಿಕ)

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಬಿಡುಗಡೆ ಮಾಡಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಬೆಂಗಳೂರು ಗ್ರಾಮಾಂತರ ಜಿಲ್ಲೆ | 1.00 |
| 2. | ದಾವಣಗೆರೆ | 0.50 |
| 3. | ಉತ್ತರ ಕನ್ನಡ | 3.50 |
| | **ಒಟ್ಟು** | **5.00** |

**ಸರ್ಕಾರಿ ಆದೇಶ ಸಂಖ್ಯೆ: ಇಡಿ 312 ಯೋಯೋಕಾ 2005, ಬೆಂಗಳೂರು, ದಿನಾಂಕ: 23ನೇ ನವೆಂಬರ್, 2005ಕ್ಕೆ ಅನುಬಂಧ**
**[ಇಡಿ 70 ಸ್ವೀಮರ (ಯೂನಿಕ್) 2005, ದಿನಾಂಕ: 23.11.2005]**

**ಅನುಬಂಧ-2**

ರಾಜ್ಯವಲಯ ಯೋಜನೆಯಡಿ ಮುಂದುವರೆಯುತ್ತಿರುವ ಕ್ಷೇತ್ರ ಶಿಕ್ಷಣಾಧಿಕಾರಿಗಳ ಹಾಗೂ ವ್ಯವಸ್ಥಾಪಕರುಗಳ ಹುದ್ದೆಗಳಿಗೆ ವೇತನ ವೆಚ್ಚವನ್ನು ಭರಿಸಲು ಅನುದಾನ ಬಿಡುಗಡೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಬಿಡುಗಡೆ ಮಾಡಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಬೆಂಗಳೂರು ಉತ್ತರ ವಲಯ-4 (ಬೆಂಗಳೂರು ಜಿಲ್ಲೆ) | 5.04 |
| 2. | ಬೆಂಗಳೂರು ದಕ್ಷಿಣ ವಲಯ-4 (ಬೆಂಗಳೂರು ಜಿಲ್ಲೆ) | 5.32 |
| 3. | ಮೈಸೂರು ನಗರ ದಕ್ಷಿಣ (ಮೈಸೂರು ಜಿಲ್ಲೆ) | 5.05 |
| 4. | ಹನೂರು (ಚಾಮರಾಜನಗರ ಜಿಲ್ಲೆ) | 3.65 |
| 5. | ಬಳ್ಳಾರಿ ಪಶ್ಚಿಮ (ಬಳ್ಳಾರಿ ಜಿಲ್ಲೆ) | 3.93 |
| 6. | ಗುಲ್ಬರ್ಗಾ ಉತ್ತರ (ಗುಲ್ಬರ್ಗಾ ಜಿಲ್ಲೆ) | 3.65 |
| 7. | ಚಡಚಣ (ಬಿಜಾಪುರ ಜಿಲ್ಲೆ) | 3.65 |
| | **ಒಟ್ಟು** | **30.29** |

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

ಪಿ.ಆರ್.1679

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುನೊಸೊ 1999, ದಿನಾಂಕ: 10.04.2000.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 49 ಮುನೊಸೊ 2004, ದಿನಾಂಕ: 09.02.2005.
3. ಉಪ ವಿಭಾಗಾಧಿಕಾರಿಗಳು, ಸಕಲೇಶಪುರ ಉಪ ವಿಭಾಗ, ಹಾಗೂ ಆಡಳಿತಾಧಿಕಾರಿಗಳು ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ ಇವರ ಪತ್ರ ಸಂಖ್ಯೆ: ಭೂಸು/ 07/05, ದಿನಾಂಕ: 10.10.2005.

**ಪ್ರಸ್ತಾವನೆ:**

ಮೇಲೆ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ ಸಂಸ್ಥೆಗೆ ಚುನಾವಣೆ ನಡೆಸಲು ನೇಮಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗುತ್ತಿದ್ದು, ಮೇಲೆ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ: 09.07.2005ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ -3 ರಲ್ಲಿ ಓದಲಾದ ಪತ್ರದಲ್ಲಿ ಉಪ ವಿಭಾಗಾಧಿಕಾರಿಗಳು, ಸಕಲೇಶಪುರ ಉಪ ವಿಭಾಗ ಹಾಗೂ ಆಡಳಿತಾಧಿಕಾರಿಗಳು ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ರವರು ಉಪ ವಿಭಾಗಾಧಿಕಾರಿಗಳ ಕೆಲಸದ ಜೊತೆಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು ಹೆಚ್‌ಆರ್‌ಪಿ (ಪ್ರ) ಹಾಸನ ಹುದ್ದೆಯ ಅಧಿಕ ಪ್ರಭಾರವನ್ನು ಹೊಂದಿದ್ದು, ಕೆಲಸದ ಒತ್ತಡದಿಂದಾಗಿ ಸಂಸ್ಥೆಗೆ ಚುನಾವಣೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಉಪ ವಿಭಾಗಾಧಿಕಾರಿಗಳು, ಸಕಲೇಶಪುರ ಉಪ ವಿಭಾಗ, ಹಾಸನ ಜಿಲ್ಲೆ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 49 ಮುನೊಸೊ 2004, ಬೆಂಗಳೂರು, ದಿನಾಂಕ: 29ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಶ್ರೀ ವಿದ್ಯಾಗಣಪತಿ ಎಜುಕೇಷನ್ ಸೊಸೈಟಿ, ಕೇರಳಾಪುರ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 10.07.2005 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ನೂತನ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ವಿಸ್ತರಣಾ ಅವಧಿಯೊಳಗಾಗಿ ಖಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.1684

**ವಿಷಯ :** ಶ್ರೀ ಯಳನಡು ಜಗದ್ಗುರು ವಿದ್ಯಾಸಂಸ್ಥೆ (ರಿ) ಅರಸೀಕೆರೆ, ಹಾಸನ ಜಿಲ್ಲೆ, ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿರುವ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 32 ಮುನೊಸೊ 2003, ದಿನಾಂಕ: 26.07.2005.
2. ಸರ್ಕಾರದ ಸಮ ಸಂಖ್ಯೆ: ಆದೇಶ ದಿನಾಂಕ: 08.08.2005.
3. ಜಿಲ್ಲಾ ನೋಂದಣಾಧಿಕಾರಿಗಳು, ಹಾಸನ ರವರ ಪತ್ರ ಸಂಖ್ಯೆ: ಸಂಘ/ 12/ 68-69, ದಿನಾಂಕ: 18.10.2005.

**ಪ್ರಸ್ತಾವನೆ:**

ಶ್ರೀ ಯಳನಡು ಜಗದ್ಗುರು ವಿದ್ಯಾಸಂಸ್ಥೆ (ರಿ) ಅರಸೀಕೆರೆ, ಹಾಸನ ಜಿಲ್ಲೆ, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಪ್ರಕಾರ ನೋಂದಾಯಿಸಲ್ಪಟ್ಟಿದ್ದು, ಸದರಿ ಸಂಘದ ಆಡಳಿತ ವ್ಯವಸ್ಥೆ, ಹಣಕಾಸು ಹಾಗೂ ಅಂಗರಚನೆಯ ಕುರಿತು ಜಿಲ್ಲಾ ನೋಂದಣಾಧಿಕಾರಿಗಳೇ ಸ್ವಯಂ ಆಗಿ ನೋಂದಣಿ ಕಾಯ್ದೆಯ ಕಲಂ 25 ರಡಿ ವಿಚಾರಣೆ ನಡೆಸಲು, ವಿಚಾರಣಾಧಿಕಾರಿಯವರನ್ನು ನೇಮಿಸಿದ್ದು, ವಿಚಾರಣಾಧಿಕಾರಿಯವರು ವಿಚಾರಣೆ ನಡೆಸಿ ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಸಂಘದ ಕಾರ್ಯದರ್ಶಿಯವರಿಗೆ ನೋಟೀಸು ನೀಡಿ ಸಂಸ್ಥೆಗೆ ಸಂಬಂಧಪಟ್ಟ ದಾಖಲಾತಿಗಳನ್ನು ಒದಗಿಸಿ ವಿಚಾರಣೆಗೆ ಸಹಕರಿಸುವಂತೆ ಕೋರಿ ಸಾಕಷ್ಟು ಕಾಲಾವಕಾಶ ಹಾಗೂ ತಿಳುವಳಿಕೆ ಪತ್ರಗಳನ್ನು ನೀಡಿದಾಗ್ಯೂ ಸಂಸ್ಥೆಗೆ ಸಂಬಂಧಿಸಿದ ದಾಖಲಾತಿಗಳನ್ನು ಒದಗಿಸಿರುವುದಿಲ್ಲ ಹಾಗೂ ವಿಚಾರಣೆಗೆ ಸಹಕರಿಸಿರುವುದಿಲ್ಲ 1996-97ನೇ ಸಾಲಿನಲ್ಲಿ ಮಾತ್ರ ಸಂಸ್ಥೆಯ ಆದಾಯ ಮತ್ತು ಖರ್ಚುಗಳ ವರದಿಯನ್ನು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ಹಾಸನ ಇಲ್ಲಿ ಫೈಲು ಮಾಡಿದ್ದು, ನಂತರದ ವರ್ಷಗಳಲ್ಲಿ ಯಾವುದೇ ದಾಖಲಾತಿಗಳನ್ನಾಗಲಿ ಅಥವಾ ವರದಿಯನ್ನಾಗಲೀ ಫೈಲ್ ಮಾಡಿರುವುದಿಲ್ಲ. ಇದು ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-13ಕ್ಕೆ ವಿರುದ್ಧವಾಗಿರುವುದರಿಂದ ಸಂಘದ ಸುಲಲಿತ ಆಡಳಿತ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27ಎ ಪ್ರಕಾರ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ವರದಿ ಮಾಡಿದ್ದು, ಸದರಿ ವರದಿಯನ್ವಯ ಕ್ರಮ ಕೈಗೊಳ್ಳಲು ಜಿಲ್ಲಾ ನೋಂದಣಾಧಿಕಾರಿ ಹಾಸನ ರವರು ಮಾಡಿದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿದ ನಂತರ ಮೇಲೆ ಓದಲಾದ -1ರ ಆದೇಶದಲ್ಲಿ ಮೇಲ್ಕಂಡ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು.

ಅಧ್ಯಕ್ಷರು, ಶ್ರೀ ಯಳನಡು ಜಗದ್ಗುರು ವಿದ್ಯಾ ಸಂಸ್ಥೆ (ರಿ) ಅರಸೀಕೆರೆ ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ: 03.08.2005ರ ಮನವಿಯಲ್ಲಿ ಮೇಲೆ ಓದಲಾದ-1ರ ಆದೇಶದಲ್ಲಿ ಸರ್ಕಾರವು ಆಡಳಿತಾಧಿಕಾರಿಯನ್ನು ನೇಮಿಸಿರುವುದು ಸ್ವಾಭಾವಿಕ ನ್ಯಾಯ ತತ್ವಕ್ಕೆ ವಿರುದ್ಧವಾಗಿದೆಯೆಂದು ದಿನಾಂಕ:

26.07.2005ರ ಆದೇಶಕ್ಕೆ ತಡೆ ಆಜ್ಞೆ ನೀಡಬೇಕೆಂದು ಕೋರಿದ್ದರು. ಸದರಿಯವರ ಮನವಿಯನ್ನು ಸರ್ಕಾರವು ಪರಿಶೀಲಿಸಿ, ಮೇಲೆ ಓದಲಾದ-1ರ ಸರ್ಕಾರಿ ಆದೇಶವನ್ನು ಮೇಲೆ ಓದಲಾದ-2ರ ಆದೇಶದಲ್ಲಿ ತಡೆ ಹಿಡಿಯಲಾಗಿತ್ತು.

ಜಿಲ್ಲಾ ನೋಂದಣಾಧಿಕಾರಿಗಳು, ಹಾಸನ ರವರು ಮೇಲೆ ಓದಲಾದ-3 ರ ಪತ್ರದಲ್ಲಿ ಮೇಲ್ಕಂಡ ಸದರಿ ಸಂಸ್ಥೆಯವರು ದಿನಾಂಕ: 27.09.2005ರಂದು ಲೆಕ್ಕ ಪತ್ರಗಳನ್ನು ಫೈಲಿಂಗ್ ಮಾಡಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ಮೇಲೆ-1ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ರದ್ದು ಪಡಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 32 ಮುನೊಸೊ 2003, ಬೆಂಗಳೂರು, ದಿನಾಂಕ:28ನೇ ನವೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ-1ರ ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುನೊಸೊ 2003, ದಿನಾಂಕ: 26.07.2005 ರನ್ವಯ ಶ್ರೀ ಯಳನಡು ಜಗದ್ಗುರು ವಿದ್ಯಾ ಸಂಸ್ಥೆ (ರಿ) ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಿರುವ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.1685

## ಶಿಕ್ಷಣ ಸಚಿವಾಲಯ

**ವಿಷಯ :** ವೃತ್ತಿ ಶಿಕ್ಷಣ ಇಲಾಖೆಗೆ 2005-06ನೇ ಸಾಲಿಗೆ 4.08 ಲಕ್ಷ ರೂ.ಗಳ ಪುನರ್ ವಿನಿಯೋಗ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 301 ಯೋಯೋಕ 2005 ದಿನಾಂಕ: 29.08.2005.
2. ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ, ಅವರ ಟಿಪ್ಪಣಿ ಸಂಖ್ಯೆ: ಡಿವಿಇ/ ಲೆಪವಿ/ ಬಿ1/ ಪುನರ್ ವಿನಿಯೋಗ 19/ 2005-06 ದಿನಾಂಕ: 28.10.2005.

**ಪ್ರಸ್ತಾವನೆ:**

ಮೇಲೆ-1ರಲ್ಲಿ ಓದಲಾದ ದಿನಾಂಕ: 29.08.2005ರ ಸರ್ಕಾರಿ ಆದೇಶದಲ್ಲಿ ವೃತ್ತಿ ಶಿಕ್ಷಣ ಇಲಾಖೆಯ ಲೆಕ್ಕ ಶೀರ್ಷಿಕೆ 2202-02-800-4-00 ಯೋಜನೇತರದಡಿಯಲ್ಲಿ ರೂ.2.22 ಲಕ್ಷರೂ.ಗಳ ಪುನರ್‌ವಿನಿಯೋಗಕ್ಕೆ ಅನುಮತಿ ನೀಡಲಾಗಿತ್ತು. ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 28.10.2005ರ ಟಿಪ್ಪಣಿಯಲ್ಲಿ ಸದರೀ ಲೆಕ್ಕ ಶೀರ್ಷಿಕೆಯಲ್ಲಿ ಅನುದಾನದ ಕೊರತೆ ಇರುವ objective code (041)ನಲ್ಲಿ ರೂ.1.20 ಲಕ್ಷ ಹಾಗೂ (051)ರಲ್ಲಿ ರೂ.2.88 ಲಕ್ಷಗಳಾಗುವುದರಿಂದ ಒಟ್ಟು 4.08 ಲಕ್ಷ ರೂ.ಗಳ ಪುನರ್ ವಿನಿಯೋಗಕ್ಕೆ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 352 ಯೋಯೋಕಾ 2005, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್, 2005**

**[ಇಡಿ 77 ಸ್ವೀಮರ (ಯೂನಿಕ್) 2005, ದಿನಾಂಕ: 01.12.2005]**

ಸರ್ಕಾರವು ವೃತ್ತಿ ಶಿಕ್ಷಣ ಇಲಾಖೆಗೆ 2005-06ನೇ ಸಾಲಿನ ಲೆಕ್ಕಶೀರ್ಷಿಕೆ 2202-02-800-4-00 (ಯೋಜನೇತರ) ಅಡಿಯಲ್ಲಿ ಉಳಿಕೆಯಾಗುವ ಅನುದಾನ ರೂ.270.52 ಲಕ್ಷಗಳಲ್ಲಿ ಉಪ ಶೀರ್ಷಿಕೆ 041 ಪ್ರಯಾಣ ವೆಚ್ಚಗಳಿಗಾಗಿ ರೂ.1.20 ಲಕ್ಷಗಳನ್ನು ಹಾಗೂ ಉಪಶೀರ್ಷಿಕೆ 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ರೂ.2.88 ಲಕ್ಷಗಳನ್ನು ಒಟ್ಟು 4.08 ಲಕ್ಷ ರೂ.ಗಳನ್ನು (ನಾಲ್ಕು ಲಕ್ಷದ ಎಂಟು ಸಾವಿರ ರೂ.ಗಳು ಮಾತ್ರ) ಪುನರ್ ವಿನಿಯೋಗಿಸಿಕೊಳ್ಳಲು ಈ ಮೂಲಕ ಅನುಮತಿ ನೀಡುತ್ತದೆ.

ಸರ್ಕಾರಿ ಸುತ್ತೋಲೆ ಸಂಖ್ಯೆ: ಆಇ 3 ಟಿಎಫ್‌ಸಿ 2005 ದಿನಾಂಕ: 28.06.2005ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹಾಗೂ ಅದರ ನಿಬಂಧನೆಗಳಿಗೆ ಒಳಪಟ್ಟು ಈ ಅನುಮತಿ ನೀಡಲಾಗಿದೆ.

ಶಿಕ್ಷಣ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಶೀಇ 886 ಐಎಫ್ (ಬಿಎ) 2005 ದಿನಾಂಕ: 17.11.2005ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),

ಶಿಕ್ಷಣ ಇಲಾಖೆ.

ಪಿ.ಆರ್.1689

**ವಿಷಯ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಅವರ ಉಪಯೋಗಕ್ಕೆ ವಾಹನ ಖರೀದಿಸಲು ಅನುಮತಿ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 279 ಯೋಯೋಕಾ 2005 ದಿನಾಂಕ: 13.09.2005 (ಇಡಿ 43 ಸ್ವೀಮರ (ಯೂನಿಕ್) 2005, ದಿನಾಂಕ: 13.09.2005).
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಅವರ ಟಿಪ್ಪಣಿ ಸಂಖ್ಯೆ: ಬಿಅ-2/ ವಾಹನ ಖರೀದಿ/ 29/2005-06 ದಿನಾಂಕ: 27.10.2005.

**ಪ್ರಸ್ತಾವನೆ:**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಅವರ ಉಪಯೋಗಕ್ಕಾಗಿ ರೂ.4.25 ಲಕ್ಷಗಳ ವೆಚ್ಚದಲ್ಲಿ ಒಂದು ವಾಹನವನ್ನು ಖರೀದಿಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ: 13.09.2005ರ ಸರ್ಕಾರಿ ಆದೇಶದಲ್ಲಿ ಸರ್ಕಾರದ ಅನುಮತಿ ನೀಡಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 27.10.2005ರ ಟಿಪ್ಪಣಿಯಲ್ಲಿ ಮಾರಾಟಗಾರರಿಂದ ಪಡೆದ

ವಾಹನದ ದರಪಟ್ಟಿಯಂತೆ ವಾಹನದ ಬೆಲೆಯು ರೂ.4,70,226/ ಆಗಿದ್ದು ಇದು ಅನುಮತಿ ನೀಡಿದ ದರಕ್ಕಿಂತ ರೂ.46,000/- ಹೆಚ್ಚಾಗಿದ್ದು ಹೆಚ್ಚುವರಿ ಮೊತ್ತದಲ್ಲಿ ವಾಹನವನ್ನು ಖರೀದಿಸಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 353 ಯೋಯೋಕಾ 2005, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್, 2005**

**[ಇಡಿ 78 ಸ್ಕೀಮರ (ಯೂನಿಕ್) 2005, ದಿನಾಂಕ: 02.12.2005]**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಅವರಿಗೆ ರೂ.4.25 ಲಕ್ಷ ರೂ.ಗಳ ವೆಚ್ಚದಲ್ಲಿ ವಾಹನ ಖರೀದಿಸಲು ಅನುಮತಿ ನೀಡಲಾದ ದಿನಾಂಕ: 13.09.2005ರ ಆದೇಶವನ್ನು ಮಾರ್ಪಡಿಸಿದ ಸರ್ಕಾರವು ರೂ.4,71,000/- (ನಾಲ್ಕು ಲಕ್ಷ ಎಪ್ಪತ್ತೊಂದು ಸಾವಿರ ರೂ.ಗಳು ಮಾತ್ರ) ವೆಚ್ಚದಲ್ಲಿ ಹೊಸ ವಾಹನವನ್ನು ಖರೀದಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಅವರಿಗೆ ಈ ಮೂಲಕ ಪರಿಷ್ಕೃತ ಅನುಮತಿ ನೀಡುತ್ತದೆ. ಇದಕ್ಕೆ ತಗಲುವ ವೆಚ್ಚವನ್ನು 2005-06ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2202-02-001-0-05-059 (ಪಿ.ಎ.) ಅಡಿಯಲ್ಲಿ ಭರಿಸತಕ್ಕದ್ದು.

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ 874 ಐಎಫ್ (ಬಿಎ) 2005 ದಿನಾಂಕ: 18.11.2005ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ.

ಪಿ.ಆರ್.1690

## ಕಂದಾಯ ಸಚಿವಾಲಯ

**ವಿಷಯ :** ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು, ರಾಯಚೂರು ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001, (ಪಿ), ದಿನಾಂಕ: 13.02.2002.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 04 ಮುನೊಸೊ 2004, ದಿನಾಂಕ: 14.07.2005.

**ಪ್ರಸ್ತಾವನೆ:**

ಮೇಲೆ ಓದಲಾದ 1ರ ಸರ್ಕಾರಿ ಆದೇಶದಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು, ಮೇಲೆ 2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಿ ಆದೇಶಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ: 12.08.2005ಕ್ಕೆ ಮುಕ್ತಾಯಗೊಂಡಿರುತ್ತದೆ. ಸಂಸ್ಥೆಗೆ ಸಂಬಂಧಿಸಿದ ಮೂಲ ದಾವೆ ಸಂಖ್ಯೆ: 1/2001ರ ಪ್ರಕರಣವು ಸಾಕ್ಷಿಗಾಗಿ ಬಾಕಿ ಇರುವುದರಿಂದ, ಆಡಳಿತಾಧಿಕಾರಿ ಅವಧಿಯನ್ನು ಇನ್ನು 6 ತಿಂಗಳವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಮುನೊಸೊ 2004, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ -27ಎ ಪ್ರಕಾರ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 13.08.2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪೀಠಾಧಿಕಾರಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.1715

## ಶಿಕ್ಷಣ ಸಚಿವಾಲಯ

**ವಿಷಯ :** 2005-2006ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಅಂಬಿಗರ ಚೌಡಯ್ಯ ಕಾಲೇಜ್ ಆಫ್ ಎಜುಕೇಷನ್‌ನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ :**
1. ದಿನಾಂಕ: 28.12.2003ರ ಸಂಖ್ಯೆ: ಇಡಿ 405 ಯುಆರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ: 17.06.2005 ಸಂಖ್ಯೆ: F.SRO/ NCTE/ B.Ed/ 2005-06/ 1473ರ/ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿನಾಂಕ: 22.06.2005ರ ನಿಜ ಶರಣ ಅಂಬಿಗರ ಚೌಡಯ್ಯ ಮಹಾವಿದ್ಯಾ ಪೀಠದ ಕಾರ್ಯದರ್ಶಿಯವರ ಪತ್ರ.
4. ದಿನಾಂಕ: 25.11.2003ರ ಸಂಖ್ಯೆ: ಎಸಿಎ3/ ಸಪಸ/ ಹೊಕಾಪ್ರ/ ಹೊಕೊಪ್ರ/ 2003-04 ಕುಲಸಚಿವರು, ಬೆಂಗಳೂರು ವಿಶ್ವವಿದ್ಯಾಲಯ ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ

ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಅಂಬಿಗರ ಚೌಡಯ್ಯ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 17.06.2005ರ ಆದೇಶದಲ್ಲಿ ಎನ್‌ಸಿಟಿಇಯು ಬೆಂಗಳೂರಿನ ಅಂಬಿಗರ ಚೌಡಯ್ಯ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ಪತ್ರದಲ್ಲಿ ಬೆಂಗಳೂರಿನ ನಿಜಶರಣ ಅಂಬಿಗರ ಚೌಡಯ್ಯ ಮಹಾವಿದ್ಯಾ ಪೀಠದ ಕಾರ್ಯದರ್ಶಿಯವರು ಅಂಬಿಗರ ಚೌಡಯ್ಯ ಕಾಲೇಜ್ ಆಫ್ ಎಜುಕೇಷನ್‌ನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಬೆಂಗಳೂರಿನ ಅಂಬಿಗರ ಚೌಡಯ್ಯ ಕಾಲೇಜ್ ಆಫ್ ಎಜುಕೇಷನ್‌ನ ಕೋರ್ಸಿಗೆ 2005-06ನೇ ಸಾಲಿನಿಂದ ಸಂಯೋಜನೆಯನ್ನು ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 360 ಯುಬಿವಿ 2005, ಬೆಂಗಳೂರು, ದಿನಾಂಕ:13ನೇ ಡಿಸೆಂಬರ್, 2005**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ನಿಜಶರಣ ಅಂಬಿಗರ ಚೌಡಯ್ಯ ಮಹಾವಿದ್ಯಾ ಪೀಠದ ಅಂಬಿಗರ ಚೌಡಯ್ಯ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್ ಕೋರ್ಸಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

ಪಿ.ಆರ್.1740

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ :**
1. ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಅ. ತನಿಖೆ/ ಪೋವಿ/ ಎಲ್-9/ ಪ್ರಸಂ-2/ 2004/ ಜಿಡಿಜಿ ದಿನಾಂಕ: 16.07.2005.
2. ತನಿಖಾಧಿಕಾರಿಯ ವರದಿ ನಂ/ಕೆಎಲ್ಎ/ ಗದಗ/ ಸಿಆರ್-2/04/131/ 05 ದಿನಾಂಕ: 12.04.2005.
3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷೀದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರ ವಿರುದ್ಧ ಗುನ್ನೆ ಸಂಖ್ಯೆ 2/ 2004ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಗದಗ್ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 16.07.2005ರ ಪತ್ರದೊಡನೆ ಕಳುಹಿಸುತ್ತಾ ಆಪಾದಿತನನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಎಡಿಜಿ/ ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕಳುಹಿಸಿಕೊಟ್ಟ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

(ಅ) ಶ್ರೀ ಅಬ್ದುಲ್ ಹಮೀದ್ ಬಿನ್ ನಜೀರ್ ಅಹಮದ್ ಶಾಲಗಾರ್ ಬೆಟಗೇರಿ ರವರ ಫಿರ್ಯಾದಿ ದಿನಾಂಕ: 15.12.2004.

(ಆ) ಪ್ರಥಮ ವರ್ತಮಾನ ವರದಿ ಗದಗ್ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ 2/2004.

(ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ: 15.12.2004.

(ಈ) ಟ್ರ್ಯಾಪ್‌ನ ಮಹಜರ್ ದಿನಾಂಕ: 15.12.2004.

(ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ/ ಸಾಅಸಂ/ ಲೋಕ/ 41/04-05 ದಿನಾಂಕ: 16.02.2005.

(ಊ) ಕೃತ್ಯ ನಡೆದ ಸ್ಥಳದ ನಕಾಶೆ:

(ಋ) ಸಾಕ್ಷಿಗಳ ಹೇಳಿಕೆಗಳು (1) ಶ್ರೀ ಅಬ್ದುಲ್ ಹಮೀದ್ ನಜೀರ್ ಶಾಲಗಾರ್ (2) ಮಹದೇವಪ್ಪ ಮಲ್ಲಪ್ಪ ಮೂಡಲಗೇರಿ (3) ಅಮರೇಶ ಶಿವಲಿಂಗಪ್ಪ ಪಾಣಿಶೆಟ್ಟರ (4) ರಾಜಶೇಖರ ಚನ್ನಬಸಪ್ಪ ಹತ್ತಿಕಾಳ (5) ಮಹಮಅಸ್ಲಮ್ ದಸ್ತಗೀರಸಾಬ್ ಮಾಳೇಕೊಪ್ಪ (6) ಕೆ.ಎಸ್. ಬಾಸಲಾಪುರ (7) ಶ್ರೀಮತಿ ಗುರ್ಲಹೊಸೂರ (8) ಕೆ.ಬಿ. ಸಂಕದಾಳ (9) ಎಚ್. ವಾಯ್ ಕಂಪ್ಲಿ (10) ವಿ.ಎಸ್. ವಜ್ರಾಂಗಿ (11) ಎಸ್.ಎನ್. ಕಲಾದಗಿ

(ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ ಗದಗ ಜೆಎಂಎಫ್‌ಸಿ 1ನೇ ನ್ಯಾಯಾಲಯದಲ್ಲಿ ದಾಖಲಾಗಿರುವ ಸಿಸಿ.ನಂ.296/ 2003ನೇ ಕಟ್ಲೆಯ ಕಾಗದ ಪತ್ರಗಳು ಈ ಪ್ರಕರಣದಲ್ಲಿ ಪಿರ್ಯಾದುದಾರರಾದ ಶ್ರೀ ಅಬ್ದುಲ್ ಹಮೀದ್ ಆರೋಪಿಸಿರುವಂತೆ ವಿಚಾರಣೆಯಲ್ಲಿ ಅವರಿಗೆ ವಿರುದ್ದವಾಗಿ ಸಾಕ್ಷಿ ಮಾಡಿಸದೆ ಪ್ರಕರಣವನ್ನು ಅಂತಿಮಗೊಳಿಸಿದೆ.

ತನಿಖಾಧಿಕಾರಿಗಳಾದ ಶ್ರೀ ಎಸ್.ಎಂ. ಶಿವಕುಮಾರ್ ಪೊಲೀಸ್ ಇನ್ಸ್‌ಪೆಕ್ಟರ್ ಕೆಎಲ್ಎ, ಗದಗ ಇವರು ಶ್ರೀ ಆರ್.ಎನ್. ಪಠಾಣ್ ಸಹಾಯಕ ಸರ್ಕಾರಿ ಅಭಿಯೋಜಕರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಗದಗ ಆರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ 2/ 2004 ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ7, 13(1) (ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು, ಫಿರ್ಯಾದಿಯಾದ ಶ್ರೀ ಅಬ್ದುಲ್ ಹಮೀದ್ ನಜೀರ್ ಶಾಲಗಾರ್ ಸಂ: ಬೆಟಗೇರಿ, ರಜಪೂತ್ ಓಣಿ, ಗದಗ ಇವರು ಗದಗ ಜೆಎಂಎಫ್‌ಸಿ 1ನೇ ನ್ಯಾಯಾಲಯದಲ್ಲಿ ದಾಖಲಾಗಿರುವ ಪ್ರಕರಣ ಸಂಖ್ಯೆ: ಸಿಸಿ. ನಂ.296/2003ರಲ್ಲಿ ಆರೋಪಿಯಾಗಿದ್ದು, ಆರೋಪಿಗಳಿಂದ ಖುಲಾಸೆ ಮಾಡಿಸಲು ರೂ.2000/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮಕೈಗೊಳ್ಳುವ ಬಗ್ಗೆ ದಿನಾಂಕ: 15.12.2004 ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮವನ್ನು ನೆರವೇರಿಸಿದ ನಂತರ ದಿನಾಂಕ: 15.12.2004 ರಂದು ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು ಅಕ್ರಮ ಸಂಭಾವನೆಯಾದ ರೂ.1000/-ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ಪ್ಯಾಂಟನ್ನು (ವಸ್ತು) ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹಾ ದೃಢಪಟ್ಟಿರುತ್ತದೆ. ಬೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.1000/- ಗಳನ್ನು ಶ್ರೀ ಆರ್.ಎನ್. ಪಠಾಣ್ (ಹಣ ಪಡೆದ ವ್ಯಕ್ತಿ) ಗದಗ ನ್ಯಾಯಾಲಯದ ಆವರಣದಲ್ಲಿರುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಲೋಕಾಯುಕ್ತ ಅಧಿಕಾರಿಗಳು ಒದಗಿಸಿರುವ ಎಲ್ಲಾ ದಾಖಲೆಗಳನ್ನು ಸಾಕ್ಷಗಳ ಹೇಳಿಕೆಗಳನ್ನು ಸಂದರ್ಭಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಆರೋಪಿತ ಸರ್ಕಾರಿ ಅಧಿಕಾರಿಯು ಫಿರ್ಯಾದಿದಾರರಿಂದ ಲಂಚ ಹಣ ರೂ.1000/- ಗಳನ್ನು ಸ್ವೀಕರಿಸಿರುವುದು ದೃಢಪಡುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋದಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7,13(1)(ಡಿ) ಮತ್ತು ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಆಪಾದಿತ ಅಧಿಕಾರಿಯಾದ ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1) (ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡುವುದು ಅಗತ್ಯವೆಂದು ಭಾವಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 713 ಪಿಪಿಇ 2005, ಬೆಂಗಳೂರು, ದಿನಾಂಕ:8ನೇ ಡಿಸೆಂಬರ್, 2005**

ಲಂಚ ನಿರೋಧ ಕಾಯಿದೆ 1988ರ ಕಲಂ 19(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಆರ್.ಎನ್. ಪಠಾಣ್, ಸಹಾಯಕ ಸರ್ಕಾರಿ ಅಭಿಯೋಜಕರು ಜೆಎಂಎಫ್‌ಸಿ 1ನೇ ನ್ಯಾಯಾಲಯ, ಗದಗ ಇವರ ವಿರುದ್ಧ ಕಲಂ 7, 13(1)(ಡಿ) ಜೊತೆಗೆ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ-1977ರ ನಿಯಮ 19(1) ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ: 08.12.2005ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
(ಕಾ ಮತ್ತು ಸು ಹಾಗೂ ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್.1736

## FOREST, ECOLOGY AND ENVIRONMENT SECRETARIAT

**Sub :** Diversion of 1.53 ha. of forest land for the purpose of Small Hydro Project at Dharmasthala forest on Dandella falls on Nethravathi river in favour of M/s Sagar Power Limited, Hyderabad.

**Read :**
1. Letter No. A5(3):GFL.CR:12/2003-04 Dated: 31.10.2003 of Principal Chief Conservator of Forests, Bangalore.
2. State Government letter No. FEE 112 FGL 2001, dated: 14.12.2001.
3. Letter No. F©A/11.2/287/KAR/HEP/810, dated: 8.7.2004 of Government of India, Ministry of Environment and Forests, Regional Office(S.Z), Bangalore.
4. Letter No. A5(3):GFL.CR:12/2003-04 Dated: 3.2.2005 of Principal Chief Conservator of Forests, Bangalore.
5. State Government letter No. FEE 112 FGL 2001, dated: 21.4.2005.
6. Letter No. F©A/11.2/287/KAR/HEP, dated: 12.8.2005 of Government of India, Ministry of Environment and Forests, Regional Office(S.Z), Bangalore.
7. State Government letter No. FEE 112 FGL 2001, dated: 22.10.2005.

8. Letter No. F©A/11.2/287/KAR/HEP/144, dated: 2.11.2005 of Government of India, Ministry of Environment and Forests, Regional Office(S.Z), Bangalore.

**PREAMBLE:**

The Principal Chief Conservator of Forests, Bangalore in his letter dated 31.10.2003 read at (1) above has submitted the proposal to obtain the approval of Government of India under Section 2 of Forest (Conservation) Act,1980 for diversion of 6.37 acres of forest land on lease basis for a period of 30 years in favour of M/s Sagar Power Limited, Hyderabad for establishing 10 MW Mini Hydel Project at Dandella falls on Nethravathi river near Dharmastala, Belthangadi Taluk in D.K.District subject to certain conditions.

2. Accordingly, the proposal was recommended to Government of India for approval vide State Government letter dated 10.5.2004 read at(2) above.

3. The Government of India, Ministry of Environment and Forests, Bangalore vide their letter dated 8.7.2004 read at (3) above observed certain discrepancies and returned the proposal and requested to submit a fresh proposal with full details. The same was communicated to the Principal Chief Conservator of Forests, Bangalore.

4. The Principal Chief Conservator of Forests, Bangalore vide his letter dated 3.2.2005 read at (4) above has submitted the revised proposal under section 2 of Forest (Conservation)Act, 1980 for diversion of 1.53 ha. of forest land in Dharmastala forest area in Belthangadi Taluk, D.K.District for establishing Mini Hydel Project in favour of M/s Sagar Power Limited, Hyderabad subject to certain conditions.

5. Accordingly the proposal was recommended to Government of India for approval vide State Government letter dated 21.4.2005 read at (5) above.

6. The Government of India Ministry of Environment and Forests, Bangalore agreed to the proposal in principle (Stage-I) under Section 2 of Forest (Conservation)Act,1980 vide their letter dated: 12.8.2005 read at (6) above, subject to fulfillment of certain conditions.

7. The Principal Chief Conservator of Forests submitted the compliance report vide their letter dated 18.10.2005 and the same has been sent to Government of India vide State Government letter dated: 22.10.2005 read at (7) above.

8. The Government of India, Ministry of Environment and Forests, Bangalore vide letter dated 2.11.2005 read at (8) above has conveyed its approval (Stage-II) under Section 2 of Forest (Conservation)Act, 1980 for diversion of 1.53 ha. of forest land in Belthangadi Taluk, Mangalore Territorial Division, D.K. District for the purpose of small Hydro Project at Dharmastala forest on Dandella Falls on Nethravathi river in favour of Sagar Power Limited, Hyderabad, subject to certain conditions.

The proposal has been examined in detail and hence the order.

**Government Order No. FEE 112 FGL 2001, Bangalore, Dated: 5th December, 2005**

In the Circumstances explained above in the preamble above Government are pleased to accord sanction under Section 2 of Forest (Conservation) Act, 1980 for diversion of 1.53 ha. of forest land in Belthangadi Taluk, Mangalore Territorial Division, D.K. District for the purpose of small Hydro Project at Dharmastala forest on Dandella Falls on Nethravathi river in favour of Sagar Power Limited, Hyderabad, subject to the following terms and conditions:

1. The legal Status of the forest land shall remain unchanged.
2. The Compensatory afforestation shall be raised over 1.53 ha.of identified non-forest land at Survey No.3/2 AP2 of Mundaje Village, Belthangadi Taluk at the cost of user agency. The State Government shall obtain prior permission of Central Government for change of location and schedule of compensatory afforestation site, if any.
3. The non-forest land for compensatory afforestation shall be notified as RF/PF under Indian Forest Act,1927 or the State Forest Act within a period of 6 months and the Nodal Officer(Forest Conservation) shall report the compliance with in 6 months.
4. The Catchments Area treatment works shall be executed as per the plan under the supervision of State Forest Department.
5. The user agency has to pay the Net present value (NPV) fixed by Government vide Notification No. FEE 247 FGL 2002, dated: 17.1.2004.
6. The State Government shall deposit the fund realized towards compensatory afforestation with the Compensatory Afforestation Fund Management and Planning Authority (CAMPA
7. The total forest area utilized for the project shall not exceed 1.53 ha.

8. In case the land is not used for the stipulated purpose, then the area will be resumed by the State Forest Department.
9. The lease is for a period of 30 years.
10. Karnataka Forest Act 1963 and Rules 1969 will be applicable for any violation
11. The lessee shall pay the lease rent as fixed by the Government from time to time.
12. Only minimum number trees shall be cut based on actual establishing Mini Hydel Project.
13. The user agency shall pay the extraction charges of trees as estimated by the concerned Deputy Conservator of Forests from the proposed land.
14. Any violation other than the permitted conditions will be dealt under Karnataka Forest Act,Karnataka Forest Rules, Forest (Conservation)Act, 1980 and Forest (Conservation)Rules, 2003.
15. The water reservoir should be kept open for drinking purpose to Wild animals.
16. No labour houses/huts will be allowed to establish at any part of time in the project area and also around the project.
17. The user agency shall abide by all the conditions imposed upon by Government of India, Government of Karnataka and Principal Chief Conservator of Forests, Bangalore.
18. Any other condition to be stipulated by State Government/ Government of India/Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

**S.R.VATSALA**

PR-1732

Under Secretary to Government,
Forest, Ecology and Environment Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಮೈಸೂರು ವೈದ್ಯಕೀಯ ಕಾಲೇಜಿನ ನಿವೃತ್ತ ಅಸ್ತಿಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾ: ಟಿ.ಮಂಜುನಾಥ ರವರ ವಿರುದ್ಧ ಇಲಾಖಾ ವಿಚಾರಣೆ.

**ಓದಲಾಗಿದೆ :**
1. ತಾ:21-09-2002 ಸಂಖ್ಯೆ:ಆರ್‌ಪಿ/82/02-03 ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಪತ್ರ.
2. ತಾ:07-10-2003 ಸಂಖ್ಯೆ:Reg(E)/Exam/594/03-04ರ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಪತ್ರ.
3. ತಾ: 19-12-2003 ಸಂಖ್ಯೆ:ಜಿಎಸ್/ಕೆಹೆದ್‌ಎಂ/03ರ ರಾಜ್ಯಪಾಲರ ಅಧೀನ ಕಾರ್ಯದರ್ಶಿಯವರ ಪತ್ರ.
4. ತಾ: 28-05-2004 ಸಂಖ್ಯೆ:ಆಕುಕ 134 ಎಂಎಂಸಿ 2004ರ ಸರ್ಕಾರಿ ಆದೇಶ.
5. ತಾ: 18-04-2005 ಸಂಖ್ಯೆ:ಡಿಎಂಇ/ಎಸ್‌ಆರ್‌ಓ(3)21/03-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
6. ತಾ: 13-06-2005 ಸಂಖ್ಯೆ:ಆಕುಕ 61 ಎಂಎಂಸಿ 2005ರ ನೋಟೀಸು.
7. ತಾ: 08-08-2005ರ ಡಾ:ಟಿ.ಮಂಜುನಾಥ್ ರವರ ಹೇಳಿಕೆ.

**ಪ್ರಸ್ತಾವನೆ:**

1) ಮೈಸೂರು ವೈದ್ಯಕೀಯ ಕಾಲೇಜಿನ ಅಸ್ಥಿಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾ:ಟಿ.ಮಂಜುನಾಥ್ ರವರು ಪ್ರಖ್ಯಾತಿಯನ್ನು ಪಡೆದು 1999ರ ರಾಜ್ಯೋತ್ಸವ ಪ್ರಶಸ್ತಿಯನ್ನಲ್ಲದೆ ಅನೇಕ ಪ್ರಶಸ್ತಿಗಳನ್ನು ಪಡೆದು ಕೀರ್ತಿ – ಯಶಸ್ಸುಗಳನ್ನು ಪಡೆದು ತಜ್ಞರೆಂಬ ಖ್ಯಾತಿಯನ್ನು ಹೊಂದಿದ್ದರು. 2003ರ ಮಾರ್ಚಿನಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷಾಧಿಕಾರಿಯಾಗಿದ್ದ ಅವರನ್ನು ವಾಪಸ್ಸು ಪಡೆದು ಅವರ ಸ್ಥಾನದಲ್ಲಿ ಡಾ:ಬಿ.ಜಿ.ಸಾಗರ್ ರವರನ್ನು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದಿಂದ ನೇಮಿಸಲಾಗಿತ್ತು. ಯಾವ ಕಾರಣ ಮತ್ತು ಆಧಾರದ ಮೇಲೆ ಹಠಾತ್ ಆಗಿ ಅವರನ್ನು ಬದಲಾಯಿಸಲಾಯಿತು ಎಂಬುದನ್ನು ಅರಿಯದೆ ಅತಿಯಾಗಿ ನೊಂದುಬಾದಿತವಾಗಿ ಅದರ ಸಂಪೂರ್ಣ credentials ಗಳನ್ನು (1) ಮುಖ್ಯಮಂತ್ರಿಯವರಿಗೆ (2) ವೈದ್ಯಕೀಯ ನಿರ್ದೇಶಕರಿಗೆ ಸಲ್ಲಿಸಿದ್ದರು. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ನ್ಯಾಯ ದೊರಕಿಸುವಂತೆ ಕೋರಿದ್ದರು.

2) ಪ್ರಸ್ತುತ ವಿಚಾರ ವಿಶ್ವವಿದ್ಯಾಲಯದ ಪರೀಕ್ಷೆ ನಡೆಸುವುದಕ್ಕೆ ಸಂಬಂಧಿಸಿದ್ದು, ಡಾ:ಟಿ.ಮಂಜುನಾಥ್‌ರವರು ಸಲ್ಲಿಸಿರುವ ತಾ:16-04-2003ರ ಪತ್ರ ಮತ್ತು ಲಗತ್ತುಗಳನ್ನು ಸಮೀಕ್ಷೆಗಾಗಿ ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಇವರಿಗೆ ಕಳುಹಿಸಲಾಗಿತ್ತು.

3) ಮೈಸೂರು ವೈದ್ಯಕೀಯ ಕಾಲೇಜಿನ ಅಸ್ತಿ ಚಿಕಿತ್ಸಾ ಶಾಸ್ತ್ರಾ ಪ್ರಾಧ್ಯಾಪಕರಾದ ಡಾ:ಟಿ.ಮಂಜುನಾಥ್ ರವರು ಘನವೆತ್ತ ರಾಜ್ಯಪಾಲರಿಗೆ ತಮ್ಮ ಅಹವಾಲಿನ ಬಗ್ಗೆ ನೇರವಾಗಿ ಪತ್ರವನ್ನು ಸಲ್ಲಿಸಿರುತ್ತಾರೆ ಹಾಗೂ ಸದರಿ ಪತ್ರದ ಪ್ರತಿಗಳನ್ನು ಸನ್ಮಾನ್ಯ ಮುಖ್ಯಮಂತ್ರಿಗಳಿಗೆ, ವೈದ್ಯಕೀಯ ಶಿಕ್ಷಣ ಸಚಿವರಿಗೆ, ಆರ್.ಜಿ.ಯು.ಹೆಚ್.ಎಸ್. ನ ಉಪ ಕುಲಪತಿರವರಿಗೆ ಮತ್ತು

ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ಕೂಡ ಸಲ್ಲಿಸಿರುತ್ತಾರೆ. ಅಸ್ತಿ ಚಿಕಿತ್ಸಾ ಶಾಸ್ತ್ರದಲ್ಲಿ ತಮ್ಮ ಸಾಧನೆ ಕುರಿತಂತೆ ಕ್ರಡೆಂಷ್ಯಲ್‌ಗಳನ್ನು ಮತ್ತು ಸಿ.ಡಿ.ಗಳನ್ನು ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ ಘನವೆತ್ತ ರಾಜ್ಯಪಾಲರು ಡಾ:ಮಂಜುನಾಥ್ ರವರನ್ನು M.S.(Ortho) ವಿಷಯದ Examinership ನಿಂದ ಏಕಾಏಕಿ ಬದಲಾಯಿಸಿದ ಬಗ್ಗೆ ಆರ್.ಜಿ.ಯು.ಹೆಚ್.ಎಸ್.ನಿಂದ ವರದಿಯನ್ನು ಪಡೆದಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಿದ ನಂತರ ಘನವೆತ್ತ ರಾಜ್ಯಪಾಲರು ಕೆಳಕಂಡಂತೆ ಆದೇಶಿಸಿರುತ್ತಾರೆ.

"It is a serious one involving not only administrative properties but also professional conduct and disciplinary action must be taken early. I will like to be kept informed about the developments."

4) ದಿನಾಂಕ 16–01–2004ರ ಸರ್ಕಾರದ ಪತ್ರದ ಮುಖಾಂತರ ಡಾ:ಟಿ.ಮಂಜುನಾಥ್ ರವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸುವ ಸಲುವಾಗಿ ಅವರ ಮೇಲಿನ ಆರೋಪಗಳನ್ನು ಒಳಗೊಂಡ ಆರೋಪ ಪಟ್ಟಿಯನ್ನು ಸಂಬಂಧಪಟ್ಟ ದಸ್ತಾವೇಜುಗಳೊಂದಿಗೆ ಸಲ್ಲಿಸುವಂತೆ ರಿಜಿಸ್ಟ್ರಾರ್ (ಪರೀಕ್ಷೆಗಳು) ರವರನ್ನು ಕೋರಲಾಯಿತು.

5) ಸದರಿ ಅಧಿಕಾರಿಯ ವಿರುದ್ಧ ಸಿ.ಸಿ.ಎ. ನಿಯಮಾವಳಿಗಳ ಮೇರೆಗೆ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸುವುದಕ್ಕಿಂತ ಮೊದಲು ಅವರ ಮೇಲಿನ ಆರೋಪಗಳು ಮೇಲ್ನೋಟಕ್ಕೆ ರುಜುವಾಗುವವೋ ಅಥವಾ ಇಲ್ಲವೋ ಎಂಬ ಬಗ್ಗೆ ಪ್ರಾರಂಭಿಕ ವಿಚಾರಣೆ ನಡೆಸಲು ವೈದ್ಯಕೀಯ ಶಿಕ್ಷಣ ಇಲಾಖೆಯ ನಿರ್ದೇಶಕರು, ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು, ಕೆ.ಆರ್.ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರು ಮತ್ತು ಚೆಲುವಾಂಬ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರನ್ನು ಒಳಗೊಂಡ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಯಿತು.

6) ತದನಂತರ ಸಿ.ಸಿ.ಎ. ನಿಯಮಾವಳಿಗಳ ನಿಯಮ 11ರ ಮೇರೆಗೆ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಡಾ:ಟಿ.ಮಂಜುನಾಥ್ ರವರಿಗೆ ದಿನಾಂಕ 13–06–2005ರಂದು ಕಾರಣ ಕೇಳುವ ಸೂಚನಾ ಪತ್ರ ನೀಡಿ, ಸದರಿ ಸೂಚನಾ ಪತ್ರ ತಲುಪಿದ 15 ದಿನಗಳೊಳಗಾಗಿ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು. ಇದಕ್ಕೆ ಡಾ:ಟಿ.ಮಂಜುನಾಥ್ ರವರು ದಿನಾಂಕ 11–07–2005ರ ತಮ್ಮ ಲಿಖಿತ ಸಮಜಾಯಿಷಿಯಲ್ಲಿ ಎಲ್ಲಾ ಆರೋಪಗಳನ್ನು ಅಲ್ಲಗಳೆದು ತಮ್ಮ ವಿರುದ್ಧದ ಆರೋಪಗಳನ್ನು ಕೈಬಿಡುವಂತೆಯು ಮತ್ತು ತಮ್ಮ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆಗೊಳಿಸುವಂತೆ ಮಹಾಲೇಖಪಾಲರಿಗೆ ಸೂಚಿಸುವಂತೆ ಕೋರಿಕೊಂಡಿರುತ್ತಾರೆ. ಡಾ:ಟಿ.ಮಂಜುನಾಥ್ ರವರು ದಿನಾಂಕ 30–06–2005ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಈ ಹಂತದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದು ಅವಶ್ಯಕತೆ ಇರುವುದಿಲ್ಲವೆಂದು ಅಭಿಪ್ರಾಯ ಪಡಲಾಯಿತು. ಅದರಂತೆಯೇ ಕೆಳಕಂಡ ಅದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 61 ಎಂಎಂಸಿ 2005, ಬೆಂಗಳೂರು, ದಿನಾಂಕ 29ನೇ ನವೆಂಬರ್, 2005**

ಮೈಸೂರು ವೈದ್ಯಕೀಯ ಕಾಲೇಜಿನ ನಿವೃತ್ತ ಅಸ್ಥಿ ಚಿಕಿತ್ಸಾ ಶಾಸ್ತ್ರ ಪ್ರಾಧ್ಯಾಪಕ ಡಾ:ಟಿ.ಮಂಜುನಾಥ್‌ರವರನ್ನು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯಂತೆ ಆಪಾದನೆಗಳಿಂದ ಮುಕ್ತಗೊಳಿಸಿ ಇಲಾಖಾ ವಿಚಾರಣೆ ನಡೆಸುವುದನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್.ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ)

ಪಿ.ಆರ್.1733

**ವಿಷಯ :** ಬೆಳಗಾಂ, ಶಿವಮೊಗ್ಗ, ಮಂಡ್ಯ, ಹಾಸನ, ರಾಯಚೂರು, ಬೀದರ್‌ನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಲ್ಲಿನ ಹೆಚ್ಚುವರಿ ಮೃತದೇಹಗಳ ಮಾರಾಟ.

**ಓದಲಾಗಿದೆ :**
1. ದಿನಾಂಕ: 17.09.2005 ಸಂಖ್ಯೆ: ಆಕುಕ 183 ಎಂಎಸ್‌ಎಫ್ 2005ರ ಸರ್ಕಾರಿ ಆದೇಶ.
2. ದಿನಾಂಕ: 20.10.2005ರ ಪ್ರಾಂಶುಪಾಲರು, ಬೆಳಗಾಂ, ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬೆಳಗಾಂ ಇವರ ಪತ್ರ.

**ಪೀಠಿಕೆ:**

1) ಮೇಲೆ ಓದಲಾದ ದಿನಾಂಕ: 17.09.2005ರ ಆದೇಶದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳಾದ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಮೈಸೂರು ವೈದ್ಯಕೀಯ ಕಾಲೇಜು, ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಬಳ್ಳಾರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಲ್ಲಿ ಹೆಚ್ಚುವರಿಯಾಗಿ ಲಭ್ಯವಾಗುವ ಮೃತ ದೇಹಗಳನ್ನು ಪ್ರತಿಯೊಂದು ಮೃತದೇಹಕ್ಕೆ 10,000 ರೂ. ಗಳಂತೆ ಖಾಸಗೀ ವೈದ್ಯಕೀಯ, ದಂತ, ಅರೆವೈದ್ಯಕೀಯ, ಆಯುರ್ವೇದ, ಯುನಾನಿ, ಹೋಮಿಯೋಪತಿ ಮತ್ತು ನ್ಯಾಚುರೋಪತಿ ಹಾಗೂ ಯೋಗಿಕ್ ವಿಜ್ಞಾನ ಸಂಸ್ಥೆಗಳಿಗೆ ಮಾರಾಟ ಮಾಡುವ ಮೂಲಕ ವಿಲೇವಾರಿ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2) ಬೆಳಗಾಂನ, ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಪ್ರಾಂಶುಪಾಲರು ವರದಿ ಮಾಡುತ್ತಾ ಮೇಲಿನ ಆದೇಶವನ್ನು ಕೆಳಕಂಡ 6 ವೈದ್ಯಕೀಯ ಕಾಲೇಜುಗಳಿಗೂ ಸಹ ಅನ್ವಯಿಸುವಂತೆ ಕೋರಿರುತ್ತಾರೆ.

1. ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳಗಾಂ.
2. ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಶಿವಮೊಗ್ಗ.
3. ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಂಡ್ಯ.
4. ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ.
5. ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು.

6. ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್.

ಈ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 183 ಎಂಎಸ್ಎಫ್ 2005, ಬೆಂಗಳೂರು, ದಿನಾಂಕ:29ನೇ ನವೆಂಬರ್, 2005**

3) ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಕೆಳಕಂಡ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಲ್ಲಿ ಹೆಚ್ಚುವರಿಯಾಗಿ ಲಭ್ಯವಾಗುವ ಮೃತ ದೇಹಗಳನ್ನು ಪ್ರತಿಯೊಂದು ಮೃತ ದೇಹಕ್ಕೆ 10,000 ರೂ.ಗಳಂತೆ (ಹತ್ತು ಸಾವಿರ ರೂಪಾಯಿಗಳು ಮಾತ್ರ) ಖಾಸಗೀ ವೈದ್ಯಕೀಯ ದಂತ, ವೈದ್ಯಕೀಯ ಆಯುರ್ವೇದ, ಯುನಾನಿ, ಹೋಮಿಯೋಪತಿ ಮತ್ತು ನ್ಯಾಚುರೋಪತಿ ಹಾಗೂ ಯೋಗಿಕ್ ವಿಜ್ಞಾನ ಸಂಸ್ಥೆಗಳಿಗೆ ಮಾರಾಟದ ಮೂಲಕ ವಿಲೇವಾರಿ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1. ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳಗಾಂ.
2. ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಶಿವಮೊಗ್ಗ.
3. ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮಂಡ್ಯ.
4. ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ.
5. ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು.
6. ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೀದರ್.

4) ಮೇಲ್ಕಂಡ ಮಾರಾಟದ ಮೂಲಕ ವಿಲೇವಾರಿ ಮಾಡುವುದರಿಂದ ಸ್ವೀಕೃತವಾದ ಮೊತ್ತವನ್ನು ರಾಜ್ಯ ಸರ್ಕಾರದ ನಿಧಿಗೆ ಪ್ರತಿಯೊಂದು ಕಾಲೇಜು ಜಮೆ ಮಾಡತಕ್ಕದ್ದು.

5) ಮೇಲ್ಕಂಡ ಪದ್ಧತಿಯು ಈ ತಕ್ಷಣದಿಂದ ಜಾರಿಗೆ ಬರುತ್ತದೆ. ಇದು ಕೇವಲ ಸರ್ಕಾರಿ ಕಾಲೇಜುಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಭವಿಷ್ಯದಲ್ಲಿ ಮತ್ತೊಂದು ಕ್ರಿಯಾ ಯೋಜನೆಯನ್ನು ಜಾರಿಗೆ ತರುವವರೆವಿಗೆ ಈ ಪದ್ಧತಿಯನ್ನು ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್.1742

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## HEALTH AND FAMILY WELFARE SECRETARIAT
## NOTIFICATION

**Sub :** Constitution of State Advisory Body on ARV Programme.

**Read :** 1. Letter No. T.11020/63/2004/ ART, Dated 05.09.2005 from Director, (Finance and Administration) NACO, Government of India, Ministry of Health and Family Welfare, New Delhi.

2. Letter No. KSAPS/ AIDS/ AD (BT)/ C-27/2005-06 Project Director, KSAPS, Bangalore.

**Preamble:**

In Government of India Letter read at (1) above, has directed that the State AIDS Control Societies are required to form a State Advisory Body on ARV treatment Programme under the Chairpersonship of Health Secretary and should include representatives from Department of Finance, Planning Indian Medical Association, Health Professional Knowledge in HIV/ AIDS, in clinical management of HIV infection including the ARV treatment faculty of medical, academic and Research Institution,s representatives and NGOs and CBOs involved in care and support of people living with HIV/ AIDS, Director, Health Services and Director, Medical Education of the States may be co-chairs of the group and Project Director, SACS be the convenor for effective implementation of ART centres.

In letter read at (2) above, the Project Director, KSAPS, Bangalore, has requested Government to constitute a State advisory Body, on ARV Programme, for effective implementation of ARV Programme in the State.

On examination of the Proposal of the Government of India, the State government, is felt that to Constitute a State Advisory Body, on ARV Programme, for effective implementation of ART centres. Hence this Order.

**Government Order No. HFW 148 FPR 2005, Bangalore, Dated: 26th November, 2005**

Under the Circumstances explained in the preamble, the Government of Karnataka are pleased to constitute a State Advisory Body ARV Programme, under the Chairmanship of Principal Secretary to Government. Health and Family Welfare with the following Members.

| | | |
|---|---|---|
| 1. | The Principal Secretary to Government, Health and Family Welfare Department, Vikasa Soudha, Bangalore. | Chairman |
| 2. | The Principal Secretary to Government, Planning Department, M.S. Building, Bangalore. | Member |
| 3. | The Secretary to Government, Women & Child welfare Department, Vidhana Soudha, Bangalore. | Member |

| | | |
|---|---|---|
| 4. | The Secretary to Government, Finance Department, Vidhana Soudha, Bangalore. | Member |
| 5. | The Commissioner, Health and Family Welfare Services, Ananda Rao Circle, Bangalore. | Member |
| 6. | The Director, Health and Family Welfare Services, Ananda Rao, Bangalore. | Member |
| 7. | The Director of Medical Education, Ananda Rao Circle, Bangalore. | Member |
| 8. | The Professor & Head of the Department of Medicine, I/c of ART Unit, Bowring & Lady Curzon Hospital, Bangalore. | Member |
| 9. | The Professor & Head of the Department of Medicine I/c of Unit, KIMS, Hubli. | Member |
| 10. | The Professor & Head of the Department of Medicine, I/c of ART Unit, K.R. Hospital, Mysore. | Member |
| 11. | The Professor of Neurovirology, NIMHANs, Bangalore. | Member |
| 12. | The President, Indian Medicine, Association. | Member |
| 13. | The Project Co-ordinator, Snehadaan, Care and support. | Member |
| 14. | The Project Co-ordinator, KNP+ | Member |
| 15. | The Representative of Confedration of Indian Industry, Southern Region and Support, Karnataka, Bangalore. | Member |
| 16. | The Project Director, KSAPS, Bangalore. | Member |
| 17. | The Additional Project Director, Karnataka State AIDS Prevention Society, Bangalore. | Member |
| 18. | The Nodal Officer, ART, KSAPS, Bangalore. | Member. |

**Terms of Reference:**

1. To review the participationof NGOs and PLWHAs.
2. To ensure development of IEC material and IEC Strategy on ART.
3. To ensure and review the participation of Institution providing Care and support to HIV/ AIDS patients, in ART Centres.
4. To review the ARV Programme in Karnataka.
5. To meet the Body in once in 3 quarter for review the programme.

By Order and in the name of the Governor of Karnataka.

**R. LEELAVATHI**

PR-1699

Under Secretary to Government,
Health and Family Welfare Department.

**COMMERCE AND INDUSTRIES SECRETARIAT**

**Sub :** Constitution of Task Force/Flying Squads for curbing illegal mining in the State.

**Read :** D.O.letter No.16/69/2005-M.IV dated 11.08.2005 of the Secretary to Government of India, Ministry of Mines, New Delhi.

**PREAMBLE:**

The Secretary to Government of India, Ministry of Mines, New Delhi in his letter read above has stated that even though Section 23 c was incorporated in the Mines and Minerals (Development and Regulation) Act, 1957, empowering the State Government to make rules for preventing illegal mining, transportation and storage of minerals and draft model rules to curb illegal mining were also circulated to all the State Government for framing rules towards this purpose and other amendments were also brought in to MM(D&R)Act, 1957 to strengthen the legal provisions for curbing illegal mining, despite this, instances of illegal mining have been coming to the notice of the Central Government. The Parliamentary Standing Committee on Coal and Steel while examining the matter of illegal mining has expressed deep concern at the large number of cases of illegal mining and asked to take urgent steps for effecting curbing this menace. In the meeting held on 07.07.2005 with the major mineral producing states, the State Governments were advised to constitute Task Force/Flying Squads having a representation from Indian Bureau of Mines (IBM) for monitoring and checking mining matters including illegal mining. Accordingly, by sending a model composition of such Task Force at the State Level and District Level, requested to initiate immediate action for constitution of Task Force/Flying Squads in the State for curbing illegal mining.

This has been examined.

**Government Order NO.CI.194:MMM.2005, Bangalore, Dated:16th November, 2005**

In the circumstances explained in the preamble, the Government are pleased to constitute Task Force at the State Level and District Level to examine the issue related to illegal mining.

**1. State Level Task Force:-**

| | | |
|---|---|---|
| i) | Secretary to Government, Commerce & Industries department | - Chairman |
| ii) | Commissioner and Director, Department of Mines and Geology | - Member Secretary/ Convener |
| iii) | Commissioner for Transport | - Member |
| iv) | Principal Chief Conservator of Forests, Bangalore | - Member |
| v) | Director General of Police, Bangalore | - Member |
| vi) | Regional Controller of Mines, IBM, Bangalore | - Member |
| vii) | Member Secretary, Karnataka State Pollution Control Board | - Member |
| viii) | Deputy Directors, Department of Mines and Geology, Bellary/Chitradurga/Tumkur | - Members |

**The functions of the Task Force:-**

(i) Review the action taken by Deputy Directors/Mining Officers/Forest Officials for checking the illegal mining activity in their respective jurisdiction.

(ii) Action taken by the State Government on the cases of illegal mining referred by Indian Bureau of Mines pr any other authority, public complaint and news item etc.,

(iii) Review the co-ordination between the member departments and discussion on the pending issues;

(iv) Any other relevant matter or issues referred by Central or State Government related to mining.

(v) Actions and recommendations of the Task Force to be communicated to the Central Government.

(vi) Collection of information for the Quarterly Return to be submitted to the Central Government.

**Periodicity of the meeting:-**

- Once in a Quarter.

**2. District Level Task Force:-**

| | | |
|---|---|---|
| i) | Deputy Commissioner of the District | - Chairman |
| ii) | Superintendent of Police of the concerned District | - Member |
| iii) | Deputy Director/Senior Geologists of the Districts | - Member Secretary/ Convener |
| iv) | Deputy Conservator of Forests of the District | - Member |
| v) | District Pollution Control Officer, State Pollution Control Board | - Member |
| vi) | Regional Transport Officer of the District | - Member |

**Function of the Task Force:**

(i) To collect/ review the information/ cases/ issues to the illegal mining within their jurisdiction.

(ii) The action taken in this regard to be communicated to the Chairman of the State Level Task Force.

**Periodicity of the meeting:**

- Once in a month.

By Order and in the name of the Governor of Karnataka.

**JAGADISH JOIS**

PR-1691

Under Secretary to Government (Mines),
Commerce & Industries Department.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಚಿಕ್ಕಮಗಳೂರು, ಇವರು ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತ ಸಂಸ್ಥೆಯಲ್ಲಿ ಎಸಗಿರುವರೆನ್ನಲಾದ ಆರೋಪಗಳ ಮೇಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ :**

1. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಕೈವಾಇ ನಿರೀ-2/ 2003-04 ದಿನಾಂಕ: 11.06.2003.
2. ಸರ್ಕಾರದ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2004, ದಿನಾಂಕ: 05.07.2004.
3. ಸರ್ಕಾರದ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2004, ದಿನಾಂಕ: 03.11.2004.
4. ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಹೊರಡಿಸಲಾಗಿದ್ದ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 110 ಕೈಸೇವಿ 2004, ದಿನಾಂಕ: 31.01.2005.
5. ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ: 10.03.2005.
6. ಅಧಿಕ ನಿರ್ದೇಶಕರು, (ಆಡಳಿತ) ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ನಂ.49, ಖನಿಜ ಭವನ, ಡಿ.ದೇವರಾಜ್ ಅರಸ್ ರಸ್ತೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಕೈವಾಇ ನಿರೀ-2/ 2003-04, ದಿನಾಂಕ: 14.09.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು 2002-03ನೇ ಸಾಲಿನಲ್ಲಿ ಮೈಸೂರು ಬಣ್ಣ ಮತ್ತು ವಾರ್ನಿಷ್ ಕಂಪನಿಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕೆಲವೊಂದು ಅವ್ಯವಹಾರ ನಡೆಸಿರುತ್ತಾರೆಂದು ಆರೋಪಿಸಿ ನೀಡಿದ ದೂರಿನ ಹಿನ್ನೆಲೆಯಲ್ಲಿ ಈ ಬಗ್ಗೆ ಅಧಿಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರುರವರಿಂದ ತನಿಖೆ ನಡೆಸಿ, ಅವರು ನೀಡಿರುವ ತನಿಖಾ ವರದಿಯಲ್ಲಿ (1) ಕಂಪನಿಯಿಂದ ಟರ್ಕಿ ದೇಶಕ್ಕೆ ರಫ್ತು ಕಳುಹಿಸಲಾದ ಅಳಿಸಲಾಗದ ಶಾಯಿಯಲ್ಲಿ ಭಾರಿ ಅವ್ಯವಹಾರ (2) ರಫ್ತು ಮಾಡಲಾದ ಅಳಿಸಲಾಗದ ಶಾಯಿಯಿಂದ ಖರೀದಿದಾರರಿಗೆ ಉಡುಗೊರೆ ನೀಡುವ ನೆಪದಲ್ಲಿ ಭಾರಿ ಅವ್ಯವಹಾರ (3) ಕಂಪನಿಯಲ್ಲಿ ದುರಸ್ತಿ ಹಾಗೂ ಬಣ್ಣ ಬಳಿಸುವ ವ್ಯವಹಾರದಲ್ಲಿ ಭಾರಿ ಹಣ ದುರುಪಯೋಗ (4) ದಸರಾ ಮಳಿಗೆಯಲ್ಲಿ ಅವ್ಯವಹಾರ ಮತ್ತು (5) ಕಂಪ್ಯೂಟರ್ ಖರೀದಿಯಲ್ಲಿ ಭಾರಿ ಅವ್ಯವಹಾರ ಇತ್ಯಾದಿ ಅವ್ಯವಹಾರಗಳಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ತಿಳಿಸಿದ್ದರ ಮೇರೆಗೆ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 1957ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಲಾಯಿತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು ಇವರು ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತ, ಮೈಸೂರು, ಇಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅವ್ಯವಹಾರ ಎಸಗಿದ್ದಾರೆಂದು ಆರೋಪಿಸಲಾದ ಆರೋಪಗಳು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದರಿಂದ, ಸದರಿ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1) (ಡಿ) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

ಮೇಲೆ ಓದಲಾದ (3)ರ ಆದೇಶದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 ಉಪ ನಿಯಮ (5) (ಸಿ) ಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇವರ ವಿರುದ್ಧ ಶಿಸ್ತು ಕ್ರಮವನ್ನು ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡಿದೆ.

ಮೇಲೆ ಓದಲಾದ (4)ರಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಮೇಲ್ಕಂಡ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ ಮತ್ತಿತರ ಅನುಬಂಧಗಳನ್ನು ದಿನಾಂಕ: 31.01.2005ರಂದು ಜಾರಿಗೊಳಿಸಲಾಗಿದೆ.

ಮೇಲೆ ಓದಲಾದ (5) ಪತ್ರದಲ್ಲಿ ಕಾರಣ ಕೇಳುವ ನೋಟೀಸಿಗೆ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತನ್ನ ಮೇಲೆ ಹೊರಡಿಸಿರುವ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಆದರೆ, ಸರ್ಕಾರವು ಇವರ ಲಿಖಿತ ಹೇಳಿಕೆಯನ್ನು ಒಪ್ಪಿಕೊಳ್ಳದೆ, ಈ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣೆ ನಡೆಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2004, ಬೆಂಗಳೂರು, ದಿನಾಂಕ:1ನೇ ಡಿಸೆಂಬರ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಮೈಸೂರು ಬಣ್ಣ ಮತ್ತು ವಾರ್ನಿಷ್ ಕಂಪನಿಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11ರ ಉಪನಿಯಮ (5)ನ್ನು ಓದಿಕೊಂಡಂತೆ ಅದೇ ನಿಯಮದ ಉಪನಿಯಮ (2)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಲು ಶ್ರೀ ಎ.ಸಿ. ಜಹಗೀರ್‌ದಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಸಂಖ್ಯೆ: 35 ಬಾಲಾಜಿ ರಸ್ತೆ, 1ನೇ ಮಹಡಿ, 2ನೇ ಕ್ರಾಸ್, 2ನೇ ಹಂತ, ಗೃಹಲಕ್ಷ್ಮಿ ಲೇಔಟ್, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11ರ (5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಉಪ ನಿರ್ದೇಶಕರು (ಆಡಳಿತ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ. 5,000/- (ರೂಪಾಯಿ ಐದು ಸಾವಿರಗಳು ಮಾತ್ರ) ಮತ್ತು ವಾಹನ ಭತ್ಯೆ ರೂ. 1,000/- (ರೂಪಾಯಿ ಒಂದು ಸಾವಿರಗಳು ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

ಪಿ.ಆರ್.1687

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಇದರ ಪುನರುಜ್ಜೀವನಕ್ಕೆ ಸರ್ಕಾರದಿಂದ ಆರ್ಥಿಕ ನೆರವು- ದುಡಿಯುವ ಬಂಡವಾಳ ಬಿಡುಗಡೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 04 ದಿನಾಂಕ: 06.05.2005.

